# ಮುನ್ನುಡಿ

"ಕಲ್ಯಾಣವೆಂಬ ಪ್ರಣತಿಯಲ್ಲಿ ಭಕ್ತಿರಸವೆಂಬ ತೈಲವನೆರೆದು, ಆಚಾರವೆಂಬ ಬತ್ತಿಗೆ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಿ"ದಂದಿನಿಂದ ಇಂದಿನವರೆಗೆ, ನಮ್ಮ ನಾಡಿನಲ್ಲೆಲ್ಲ ಬಸವಣ್ಣನವರ ಹೆಸರು ಮನೆಮಾತಾಗಿ ಮೊಳಗುತ್ತ ಬಂದಿದೆ. ಕನ್ನಡನಾಡಿನಲ್ಲಿ ಜನ್ಮವೆತ್ತಿ, ಕನ್ನಡಿಗರಾಗಿ ಬಾಳಿ ಬೆಳೆದು, ಕನ್ನಡದ ಮೂಲಕ ವಾಗಿಯೇ ಅಭೂತಪೂರ್ವವಾದ ಅನೇಕಮುಖ-ಕ್ರಾಂತಿಯೊಂದನ್ನು ಮಾಡಿದ ಅವರ ಬಗೆಗೆ ಕನ್ನಡಿಗರಿಗೆ ಅಪಾರವಾದ ಆದರ-ಅಭಿಮಾನಗಳಿರುವುದು ಸಹಜವಾದುದೇ ಆಗಿದೆ. ಬಾಗೇವಾಡಿಯಲ್ಲಿ ಅಂಕುರಿಸಿ, ಕಲ್ಯಾಣದ "ಅನುಭವ ಮಂಟಪ"ದಲ್ಲಿ ಅರಳಿ, ಕನ್ನಡನಾಡಿನಲ್ಲೆಲ್ಲ ಗಮಗಮಿಸಿ, ನೆರೆನಾಡುಗಳಲ್ಲಿಯೂ ವ್ಯಾಪಿಸಿದ 'ಬಸವ ನೆಂಬ ಬಳ್ಳಿ'ಯು ಬಿಟ್ಟ ವಚನಕುಟ್ಮಲ ಕಾಲದಿಂದ ಕಾಲಕ್ಕೆ ಪ್ರಫುಲ್ಲವಾಗಿ, ಲೋಕ ವಿಹಾರಿಗಳ ಮನಸ್ಸನ್ನು ಆಕರ್ಷಿಸಿ, ಅವರ ಕಾಳಿಕೆಯನ್ನು ಕಳೆಯುತ್ತ; ಅವರನ್ನು ಮಹೋನ್ನತಿಯತ್ತ ಕರೆದೊಯ್ಯುತ್ತ; ವಿಶ್ವಬಂಧುತ್ವಕ್ಕೆ ಪ್ರೇರೇಪಿಸುತ್ತ ಉಳಿದುಬಂದಿವೆ.

ಆಡು ಮುಟ್ಟದ ಗಿಡವಿಲ್ಲವೆನ್ನುತ್ತಾರೆ! ಬಸವಣ್ಣನವರು ಮಾಡದ ಕ್ರಾಂತಿಯಿಲ್ಲ ವೆಂದರೂ ಸಲ್ಲುತ್ತದೆ!! ವೇದಾಗಮೋಪನಿಷತ್ತುಗಳ ಸಾರವನ್ನು ಸರಳ ಸುಂದರ ಕನ್ನಡದಲ್ಲಿ ವಿವರಿಸಿ, ಜನವಾಣಿಯನ್ನೇ ದೇವವಾಣಿಯ ಎತ್ತರಕ್ಕೆ ಎತ್ತಿದ ಸಾಹಿತ್ಯ-ಕ್ರಾಂತಿ ; ಜನ್ಮ, ವರ್ಣ, ವಂಶ, ಲಿಂಗ, ಉದ್ಯೋಗ, ಅಧಿಕಾರ, ಐಶ್ವರ್ಯ ಇತ್ಯಾದಿ ಗಳನ್ನು ಅವಲಂಬಿಸಿ ಬೃಹದಾಕಾರವಾಗಿ ಬೆಳೆದಿದ್ದ ನೀಚೋಚ್ಚಭಾವಗಳನ್ನು ಬೇರು ಸಹಿತ ಕಿತ್ತೊಗೆದು ಧರ್ಮದ ದ್ವಾರವನ್ನು ಸರ್ವರಿಗೂ ತೆರೆದಿಟ್ಟು, ಸರ್ವರಿಗೂ ಸ್ವಾನುಭವದ ಬೆಳಕಿನಲ್ಲಿ ಸ್ವಾತ್ಮೋನ್ನತಿಯನ್ನು ಸಾಧಿಸಿಕೊಳ್ಳಲು ಸ್ವಾತಂತ್ರ್ಯವಿತ್ತ ಧರ್ಮ-ಕ್ರಾಂತಿ; ಉಂಬಲ್ಲಿ-ಉಡುವಲ್ಲಿ, ಕೊಂಬಲ್ಲಿ-ಕೊಡುವಲ್ಲಿ ಕುಲವನ್ನು ನೋಡದೆ ಆಚಾರವನ್ನು ನೋಡಬೇಕೆಂದು ಹೇಳಿ, ಅಸ್ಪೃಶ್ಯತೆ, ಶೂದ್ರತ್ವ ಸ್ತ್ರೀತ್ವ ಇತ್ಯಾದಿ ಅಭಿಶಾಪಗಳಿಗೆ ಒಳಗಾಗಿ ಯುಗ-ಯುಗಗಳಿಂದ ಮೃತಪ್ರಾಯರಾಗಿದ್ದ ಸಾಮಾನ್ಯ ಜನರನ್ನೇ ಸಾಧಕರನ್ನಾಗಿ, ಶರಣರನ್ನಾಗಿ, ಮಾಡಿದ ವಿಸ್ಮಯಜನಕವಾದ ಸಾಮಾಜಿಕ-ಕ್ರಾಂತಿ; ಸತ್ಯಶುದ್ಧ ಕಾಯಕವಾವುದೇ ಆಗಲಿ ಅದು ಪವಿತ್ರವಾದುದು, ಅದೇ ಕೈಲಾಸ, ಎಲ್ಲರೂ—ಜನರೂ ಜನನಾಯಕರೂ ಒಂದಿಲ್ಲೊಂದು ಕಾಯಕವನ್ನು ಮಾಡಲೇ ಬೇಕು, ಅನ್ಯರ ಸಂಪಾದನೆಯಿಂದ ಬದುಕುವ ಜಿಗಣೆಗಳಾಗಬಾರದು ಎಂದು ಹೇಳಿ ಸಮಾಜದಲ್ಲಿ ಸ್ವಯಂಪೂರ್ಣತೆಯನ್ನೂ, ಆರ್ಥಿಕ ಸ್ವಾವಲಂಬನ ವನ್ನೂ,ಶ್ರಮ,ಗೌರವ ಬುದ್ಧಿಯನ್ನೂತಂದ ಆರ್ಥಿಕ-ಕ್ರಾಂತಿ; ಅಂತರಂಗ-ಬಹಿರಂಗ

ಶುದ್ಧಿಗಳೇ ಚರಮುಸಿದ್ಧಿಗೆ ಮೂಲವೆಂದು ಹೇಳಿ, "ಆಚಾರವೇ ಸ್ವರ್ಗ ಅನಾಚಾರವೇ ನರಕ, ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ, ದಯವೇ ಧರ್ಮದ ಮೂಲ, ಸದು-ವಿನಯವೇ ಸದಾಶಿವನ ಒಲುಮೆ, ಧನದಲ್ಲಿ ಶುಚಿ ಪ್ರಾಣದಲ್ಲಿ ನಿರ್ಭಯ ನಾಗಿರುವವರಿಗೆ ಮರಣವೇ ಮಹಾನವಮಿ—ಎಂದು ಹೇಳಿ, ನೀತಿಯ ನೆಲಗಟ್ಟಿನ ಮೇಲೆಯೇ ಸುಂದರ ಸಮಾಜಮಂದಿರ ನಿಲ್ಲಬಲ್ಲುದು ಎಂದೊರೆದ ನೈತಿಕ-ಕ್ರಾಂತಿ;—ಹೀಗೆ ಹಲವಾರು ಮೂಲಭೂತ ಕ್ರಾಂತಿಗಳ ಪ್ರವರ್ತಕರು ಬಸವಣ್ಣನವರು! ಭಾರತದ ಇತಿಹಾಸದಲ್ಲಿ ಬಸವಯುಗ ನಿಜವಾಗಿಯೂ ಸುವರ್ಣ ಯುಗ !! ಅದು ಮರುಕಳಿಸಿ ಊರ್ಜಿತವಾಗಬೇಕೆಂಬುದೇ ನಮ್ಮ ಗುರಿ.

ಈ ವಿಶ್ವವಿಭೂತಿ ಬಸವಣ್ಣನವರ ಜನ್ಮಕಾಲದ ಬಗ್ಗೆ ಭಿನ್ನಾಭಿಪ್ರಾಯಗಳಿರ ಬಹುದಾಗಲಿ, ಅವರ ಲಿಂಗೈಕ್ಯಕಾಲ 1167–68 ಎಂಬ ಬಗ್ಗೆ ಎರಡು ಅಭಿಪ್ರಾಯ ಇದ್ದಂತಿಲ್ಲ. ಆದುದರಿಂದ 1967ರಲ್ಲಿ ಅವರ ಎಂಟನೆಯ ಶತಮಾನೋತ್ಸವದ ಆಚರಣೆಯ ಮಹದ್ಭಾಗ್ಯ ನಮ್ಮದು. ಆದರೆ ಚರಿತ್ರಾರ್ಹವಾದ, ಚಿರಸ್ಮರಣೀಯವಾದ ಈ ಮಹೋತ್ಸವವನ್ನು ನಮ್ಮ ನಾಡಿನಲ್ಲಿ ಮಾತ್ರ ನೆರವೇರಿಸಿದರೆ ಸಾಲದು. ದೇಶ ವಿದೇಶಗಳಲ್ಲಿಯೂ ಜರುಗಿಸಬೇಕು, ವೈಭವೋತ್ಸಾಹಗಳೊಡನೆ ಜರುಗಿಸಬೇಕು. ಇಂದು ಕನ್ನಡಿಗರೆಲ್ಲರ ಕಣ್ಮಣಿಯಾಗಿ ಇರುವ ಬಸವಣ್ಣನವರು ವಿಶ್ವದ ವಿಚಾರವಂತ ರೆಲ್ಲರ ಮನೋಮಂದಿರಗಳಲ್ಲಿ ರಾರಾಜಿಸುವಂತೆ ಮಾಡಬೇಕು. ಆಗ ಕನ್ನಡಿಗರ ಕೀರ್ತಿ ಸಾಗರಗಳಾಚೆ ಹರಡುವುದು, ಭಾರತದ ಜಿಜ್ಞಾಸ ಭುವಿಯಲ್ಲೆಲ್ಲ ಬೆಳಗುವುದು.

ಇದನ್ನು ಮನದಂದ ಬಸವ-ಭಕ್ತರು ಹಲವರು ಈ ಘನೋದ್ದೇಶದ ಸಾಧನೆಗಾಗಿ 1964ರ ಮೇ ತಿಂಗಳಲ್ಲಿ 'ಬಸವ ಸಮಿತಿ' ಎಂಬ ಸಂಸ್ಥೆಯನ್ನು ಕಟ್ಟಿದರು. ಅದು ಹುಟ್ಟಿದ ಘಳಿಗೆ ಶುಭಘಳಿಗೆ ಎಂದು ತೋರುತ್ತಿದೆ. ಮುಂಬೈ, ಧಾರವಾಡ, ದಾವಣ ಗೆರೆ, ಹೈದರಾಬಾದು, ಸೊಲ್ಲಾಪುರ, ಮದ್ರಾಸ್, ಬೆಂಗಳೂರು ಮುಂತಾದೆಡೆಗಳಲ್ಲಿ ಅದರ ಸಭೆಗಳು ಸಮಾವೇಶಗೊಂಡು ಎಲ್ಲೆಡೆಗಳಲ್ಲಿಯೂ ಅದಕ್ಕೆ ನಿರೀಕ್ಷಿಸಿದುದ ಕ್ಕಿಂತಲೂ ಹೆಚ್ಚು ಪ್ರೋತ್ಸಾಹ, ಸಹಾಯ, ಸಹಕಾರ ಈಗಾಗಲೇ ದೊರೆತಿದೆ. ಸಮಿತಿಯ ಘಟನೆ ಸಿದ್ಧವಾಗಿ ಅಂಗೀಕೃತವಾಗಿದೆ; ಪ್ರದೇಶ ಸಮಿತಿಗಳ ಸ್ಥಾಪನೆ ಸಾಗಿದೆ; ಸದಸ್ಯ ಸಂಪತ್ತು ಭರದಿಂದ ಬೆಳೆಯುತ್ತಲಿದೆ; ಬಸವಣ್ಣನವರ ಆರಿಸಿದ ಒಂದು ನೂರೆಂಟು ವಚನಗಳ ೨೫೦೦೦ ಪ್ರತಿಗಳನ್ನು ಭಾರತದ ವಿವಿಧ ಭಾಷೆಗಳಲ್ಲಿ ಉಚಿತ ವಿತರಣೆಗಾಗಿ ಪ್ರಕಟಿಸುವ ಕಾರ್ಯ ಪ್ರಾರಂಭವಾಗಿದೆ.

ಉದಾರಿಗಳು ಕೊಡುಗೈಯಿಂದ ಮತ್ತಷ್ಟು ಮುಂದೆ ಬಂದುದಾದರೆ 'ಬಸವ ವಚನಾಮೃತ'ವನ್ನು ಜರ್ಮನ್, ಅರಬ್ಬಿ, ರಶಿಯನ್, ಚೀಣೀ ಇತ್ಯಾದಿ ವಿದೇಶೀ ಭಾಷೆಗಳಲ್ಲೂ ಪ್ರಕಟಿಸಿ ಉಚಿತವಾಗಿ ಹಂಚುವ ವಿಚಾರವಿದೆ. ಬಸವಣ್ಣನವರ ಉಚ್ಚ

ಮತ್ತು ನಿತ್ಯನವೀನ ವಿಚಾರಗಳನ್ನು ವಿಶ್ವದ ಎಲ್ಲ ಭಾಷೆಗಳನ್ನಾಡುವವರಿಗೂ ಒದಗಿಸುವುದು ಮಾನವತೆಯ ಪ್ರಗತಿಯ ದೃಷ್ಟಿಯಿಂದ ಅತ್ಯಗತ್ಯ.

ಈ 'ಬಸವ ವಚನಾಮೃತ' ಗ್ರಂಥದಲ್ಲಿ 108 ವಚನಗಳು ಮಾತ್ರ ಸಮಾವೇಶ ಗೊಂಡಿದ್ದರೂ, ಬಸವಣ್ಣನವರು—ದೇವರು ಜಗತ್ತು-ಜೀವಗಳ ಬಗ್ಗೆ, ಸರ್ವ ಸಮಾನತೆಯ ಬಗ್ಗೆ, ಕಾಯಕದ ಬಗ್ಗೆ, ಅಂತರಂಗ-ಬಹಿರಂಗಶುದ್ಧಿಗಳ ಸಾಧನೆಯ ಬಗ್ಗೆ, ದೇವರನ್ನೊಲಿಸುವ ದಾರಿಯ ಬಗ್ಗೆ—ವ್ಯಕ್ತಪಡಿಸಿರುವ ಎಲ್ಲ ವಿಚಾರಗಳೂ ಇವುಗಳಲ್ಲಿ ಅಡಕವಾಗಿವೆಯೆಂದು ಹೇಳಬಹುದು.

ಈ ವಚನ ಸಂಗ್ರಹ ಕಾರ್ಯವನ್ನು ಅತ್ಯಂತ ಸಮರ್ಪಕವಾಗಿ ಮಾಡಿಕೊಟ್ಟ ಸರ್ವಶ್ರೀ ಟಿ. ಎನ್. ಮಲ್ಲಪ್ಪನವರು, ಸಿದ್ದಯ್ಯ ಪುರಾಣಿಕರು ಮತ್ತು ಜೀರಿಗೆ ಕಟ್ಟಿ ಬಸವಪ್ಪನವರಿಗೆ ಸಮಿತಿಯು ಕೃತಜ್ಞತೆಯನ್ನು ಸಲ್ಲಿಸುತ್ತದೆ.

ಮೊದಲನೆ ಆವೃತ್ತಿಯ ಸಂಪೂರ್ಣ ವೆಚ್ಚವನ್ನು ದೈವಭಕ್ತರೂ ''ಗುರುಸೇವಾ ಧುರೀಣರೂ" ಬೆಂಗಳೂರಿನ ಸುಪ್ರಸಿದ್ಧ ರೇಷ್ಮೆ ವ್ಯಾಪಾರಿಗಳೂ ಆದ ಶ್ರೀ ಶಂಕರಪ್ಪ ಶೆಟ್ಟರು ವಹಿಸಿಕೊಂಡದ್ದನ್ನು ಕೃತಜ್ಞತೆಗಳೊಂದಿಗೆ ಇಲ್ಲಿ ಸ್ಮರಿಸುತ್ತೇವೆ.

ಮೊದಲನೇ ಆವೃತ್ತಿಯ 'ಬಸವ ವಚನಾಮೃತ'ದಲ್ಲಿ ಮೇಲೆ ಹೇಳಿರುವಂತೆ 108 ವಚನಗಳ ಪಾಠಭಾಗ ಮಾತ್ರ ಸಮಾವೇಶಗೊಂಡಿದ್ದವು. ಈಗ ಎರಡನೆಯ ಆವೃತ್ತಿಯಲ್ಲಿ ಅದೇ 108 ವಚನಗಳನ್ನು ಡಾ. ಎಲ್. ಬಸವರಾಜು ಅವರು ಪರಿಷ್ಕರಿಸಿ, ಅವುಗಳಿಗೆ ಪಾಠಾಂತರಗಳನ್ನು ಕೊಟ್ಟು, ವಿವರಣಾತ್ಮಕ ವ್ಯಾಖ್ಯಾನವನ್ನು ಬರೆದು, ಜೊತೆಗೆ ಇದುವರೆಗೆ ಉಪಲಬ್ಧವಾಗದೇ ಇದ್ದ ಬಸವಣ್ಣನವರ 36 ವಚನ ಗಳನ್ನು ಓಲೆಯ ಗ್ರಂಥಗಳಿಂದ ಸಂಶೋಧಿಸಿ ಎತ್ತಿ ಪ್ರಸ್ತುತ ಆವೃತ್ತಿಯಲ್ಲಿ ಸೇರಿಸಿರು ವರು. ಅಭ್ಯಾಸಿಗಳಿಗೆ ಅನುಕೂಲವಾಗುವಂತೆ ಅರ್ಥಕೋಶ ಅಕಾರಾದಿಗಳನ್ನು ಅವರು ಅಣಿಮಾಡಿಕೊಟ್ಟಿರುವರು. ಬಸವಣ್ಣನವರ ಧರ್ಮ-ಸಾಹಿತ್ಯ-ಪ್ರಚಾರ ಕಾರ್ಯದ ಸಂಬಂಧವಾಗಿ ಅವರು ಮಾಡಿರುವ ಈ ವಿದ್ವತ್ಪೂರ್ಣ-ಸೇವೆಗಾಗಿ ಅವರನ್ನು ಬಸವಸಮಿತಿಯ ಪರವಾಗಿ ಮತ್ತು ಅಭಿಮಾನಿಗಳ ಪರವಾಗಿ ಅಭಿನಂದಿಸುತ್ತೇವೆ.

ಅತ್ಯಲ್ಪಾವಧಿಯಲ್ಲೇ ಈ ಗ್ರಂಥವನ್ನು ಸುಂದರವಾಗಿ ಮುದ್ರಿಸಿಕೊಟ್ಟ ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸಿನ ವ್ಯವಸ್ಥಾಪಕರಾದ ಶ್ರೀಯುತರು ಗಳಾದ ಜಿ. ಎಚ್. ರಾಮರಾವ್ ಮತ್ತು ಜಿ. ಎಚ್. ಕೃಷ್ಣಮೂರ್ತಿ ಸಹೋದರರಿಗೆ ಸಮಿತಿಯ ಪರವಾಗಿ ಆಭಾರ ಮನ್ನಿಸುತ್ತೇವೆ.

ಬಸವಸದನ
ಬೆಂಗಳೂರು
15-4-1966

ಬಿ. ಡಿ. ಜತ್ತಿ
ಚೇರಮನ್
ಬಸವಸಮಿತಿ

# ಪುನರ್ಮುದ್ರಣದ ಮುನ್ನುಡಿ

'ಬಸವ ವಚನಾಮೃತ'ದ ಪರಿಷ್ಕೃತ ದ್ವಿತೀಯ ಮುದ್ರಣದ ಪ್ರತಿಗಳೆಲ್ಲವೂ ಮುಗಿದು ಹೋದುದರಿಂದ ಅದರ ಪುನರ್ಮುದ್ರಣದ ಕಾರ್ಯವನ್ನು ಕೈಕೊಳ್ಳಬೇಕಾಯಿತು. ಬಸವ ಸಮಿತಿಯ ಪ್ರಕಟನೆಗಳಿಗೆ ಕನ್ನಡಿಗರೂ, ಕರ್ನಾಟಕ, ಮೈಸೂರು ಮತ್ತು ಬೆಂಗಳೂರು ವಿಶ್ವವಿದ್ಯಾನಿಲಯಗಳವರೂ ಮತ್ತು ಮೈಸೂರು ರಾಜ್ಯದ ವಿದ್ಯಾ ಇಲಾಖೆಯವರೂ ನೀಡುತ್ತ ಬಂದಿರುವ ಪ್ರೋತ್ಸಾಹವನ್ನಿಲ್ಲಿ ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಈ ಪುಸ್ತಕವನ್ನು ಪರಿಷ್ಕರಿಸಿ ವ್ಯಾಖ್ಯಾನವನ್ನು ಬರೆದುಕೊಟ್ಟ ಡಾ. ಎಲ್. ಬಸವರಾಜು ಅವರ ಉಪಕಾರವನ್ನು ನೆನೆಯದಿರಲಾರೆವು.

ಈ ಗ್ರಂಥವನ್ನು ಸುಂದರವಾಗಿ ಮುದ್ರಿಸಿಕೊಟ್ಟ ಬೆಂಗಳೂರು ಓರಿಯಂಟ್ ಪವರ್ ಪ್ರೆಸ್ಸಿನ ಒಡೆಯರಾದ ಶ್ರೀ ಜಿ. ಶ್ರೀನಿವಾಸನ್ ಅವರಿಗೆ ವಂದನೆಗಳು.

೧೫-೩-೧೯೭೦

ಬಿ. ಡಿ. ಜತ್ತಿ
ಚೇರ್‌ಮನ್
ಬಸವಸಮಿತಿ

## ಅರಿಕೆ

ಬಸವಸಮಿತಿಯ ಅಧ್ಯಕ್ಷರಾದ ಶ್ರೀ ಬಸಪ್ಪ ದಾನಪ್ಪ ಜತ್ತಿ ಸಾಹೇಬರು ನನಗೆ ವಿಶ್ವಾಸದಿಂದ ನಿರ್ವಹಿಸಿಕೊಟ್ಟ ಈ 'ಬಸವ ವಚನಾಮೃತ'ದ ಪರಿಷ್ಕರಣಕಾರ್ಯವನ್ನು ಯಥಾಶಕ್ತಿ ನೆರವೇರಿಸಿದ್ದೇನೆ. ಬಸವಣ್ಣನವರ ಇಲ್ಲಿನ ನೂರೆಂಟು ವಚನಗಳನ್ನು ಪರಿಷ್ಕರಿಸುವಲ್ಲಿ ಈ ಕೆಳಕಂಡ ಮೂಲಗಳನ್ನು ಬಳಸಿಕೊಂಡಿರುವೆನು :

ಏ: ಮೈಸೂರಿನ ಪ್ರಾಚ್ಯ ಸಂಶೋಧನಾಲಯದK 450ನೇ ನಂಬರಿನ ಓಲೆಯ ಗ್ರಂಥ, ಇದು 15ನೇ ಶತಮಾನದ ಮಹಲಿಂಗನ ಏಕೋತ್ತರಶತಸ್ಥಲ.

ಕ: ಶ್ರೀ ಎಂ. ಡಿ. ಬಸಪ್ಪನವರಿಂದ ಎರವಲು ತಂದಿದ್ದ ಬಸವಣ್ಣನವರ ಷಟ್ಸ್ಥಲ ವಚನಗಳ ಓಲೆ ಗ್ರಂಥ. ಇದು ಒಂದು ನಳ ಸಂವತ್ಸರದಲ್ಲಿ ಪ್ರತಿಯಾದುದು.

ಚ: ಶ್ರೀ ಎಂ. ಚಂದ್ರಶೇಖರ್, ಎಂ. ಎ. ಅವರಿಂದ ಎರವಲು ತಂದಿದ್ದ ಬಸವೇಶ್ವರರ ಷಟ್ಸ್ಥಲ–ವಚನಗಳ ಓಲೆಯ ಗ್ರಂಥ: ಇದು ಕ್ರಿ ಶ. 1650 ರಲ್ಲಿ ಪ್ರತಿಯಾದುದು.

ಚ್ಚ: ಶ್ರೀ ಎಂ. ಚಂದ್ರಶೇಖರ್, ಎಂ. ಎ. ಅವರಿಂದ ಎರವಲು ತಂದಿದ್ದ ಇನ್ನೊಂದು ವಚನಗಳ ಕಟ್ಟಿನಲ್ಲಿನ ಸಂಪಾದನೆಯ ಸಿದ್ಧವೀರಣಾಚಾರ್ಯರು ಸೇರಿಸಿದ ಆಚರಣೆಯ ಸಂಬಂಧದ ವಚನಗಳ ವಿಭಾಗ.

ನ: } ನನ್ನಲ್ಲಿರುವ ಬಸವೇಶ್ವರರ ಷಟ್ಸ್ಥಲದ ವಚನಗಳ ಕಟ್ಟು. ಇದರಲ್ಲಿ
ನಿ: } ಚೆನ್ನಂಜೆ ದೇವಗು ಸಂಕಲನ ಮಾಡಿದ ಬಸವ ಸ್ತೋತ್ರದ ವಚನ, ಮಿಶ್ರ ಸ್ತೋತ್ರದ ವಚನ, ಆಚರಣೆಯ ವಚನಗಳೂ ಇವೆ.

ಲಿ: ಶ್ರೀ ಸಂ. ಶಿ. ಭೂಸನೂರು ಮಠ, ಎಂ. ಎ. ಅವರಿಂದ ಸಂಪಾದಿತವಾಗಿ ಧಾರವಾಡದ ಮುರುಘಾಮಠದಿಂದ ಪ್ರಕಟಣೆಯಾದ 'ಲಿಂಗಲೀಲಾವಿಲಾಸ ಚಾರಿತ್ರ'. [ಲಿR—ಎಂದರೆ ಆ ಗ್ರಂಥದಲ್ಲಿ ಕೊಟ್ಟಿರುವ ಪಾಠಾಂತರ.]

ವ: ಪ್ರೊ. ಡಿ. ಎಲ್. ನರಸಿಂಹಾಚಾರ್ ಅವರಿಂದ ಎರವಲು ತಂದಿದ್ದ "ವಚನ ಸಾರ" ಎಂಬ ಎಲ್ಲ ಶರಣರ ವಚನಗಳ ಓಲೆಯ ಗ್ರಂಥ. ಇದು ಹದಿನೇಳನೇ ಶತಮಾನದಲ್ಲಿ ಪ್ರತಿಯಾದುದು.

ಶೂ: ಶ್ರೀ ಸಂ. ಶಿ. ಭೂಸನೂರು ಮಠ, ಎಂ. ಎ. ಅವರಿಂದ ಸಂಪಾದಿತವಾಗಿ, ರಾವೂರ ಶ್ರೀ ಸಿದ್ಧಲಿಂಗೇಶ್ವರಮಠದಿಂದ ಪ್ರಕಟಣೆಯಾದ "ಶೂನ್ಯ ಸಂಪಾದನೆ" [ಶೂR–ಎಂದರೆ ಆ ಗ್ರಂಥದಲ್ಲಿ ಕೊಟ್ಟಿರುವ ಪಾಠಾಂತರ]

ಸ: ಶ್ರೀ ಬಸವನಾಳರು ಸಂಪಾದಿಸಿರುವ "ಬಸವಣ್ಣನವರ ವಚನಗಳು" ಎಂಬ ಗ್ರಂಥ.

ಹ: ಮೈಸೂರಿನ ಪ್ರಾಚ್ಯ ಸಂಶೋಧನಾಲಯದಲ್ಲಿನ ಒಂದು ಓಲೆಯ ಗ್ರಂಥ ಇದು ಬಸವಣ್ಣನವರ ಷಟ್‌ಸ್ಥಲದ ವಚನಗಳ ಕಟ್ಟು.

ಹಳ: ಶ್ರೀ ಫ.ಗು. ಹಳಕಟ್ಟಿಯವರು ಪ್ರಕಟಿಸಿರುವ ಬಸವೇಶ್ವರರ ವಚನಗಳು

ಹಸ:
ಹಸು: ಈ ಮೂಲವಾವುದೆಂಬುದು ನನ್ನ ಟಿಪ್ಪಣಿಯಲ್ಲಿ ಕೈತಪ್ಪಿ ಹೋಗಿದೆ.

ಮೇಲಣ ಆಕರಗಳಿಗೆ ಸಂಬಂಧಿಸಿದ ಮಹನೀಯರೆಲ್ಲರಿಗೆ ಕೃತಜ್ಞತ ಪೂರ್ವಕವಾದ ವಂದನೆಗಳು.

ಈ ಕಾರ್ಯನಿರ್ವಹಣೆ ನನ್ನೊಬ್ಬನಿಂದಲೇ ಆಯಿತೆಂಬುದು ಸುಳ್ಳು. ನನ್ನ ಹಲವಾರು ಗೆಳೆಯರು ನನಗೆ ಈ ಸಂಬಂಧವಾಗಿ ಸಹಾಯ ಮಾಡಿರುವರು, ಅವರಲ್ಲಿ ನನಗೆ ಹಲವು ಉಚಿತ ಸಲಹೆಗಳನ್ನು ನೀಡಿ ಪ್ರೋತ್ಸಾಹಿಸಿರುವ ಡಾ. ಎಚ್. ತಿಪ್ಪೇರುದ್ರಸ್ವಾಮಿಗಳನ್ನು ಸ್ಮರಿಸದಿರಲಾರೆ.

ಈ ನನ್ನ ಪ್ರಯತ್ನ ಜನಕ್ಕೆ ಪ್ರಿಯವಾದರೆ ನಾನು ಕೃತಾರ್ಥ. ಭಿನ್ನಾಭಿಪ್ರಾಯಗಳು ಅಪರೂಪವೇನಲ್ಲ. ಒಟ್ಟಿನಲ್ಲಿ ಶ್ರೀಸಾಮಾನ್ಯರ ಸಹಾನುಭೂತಿಯನ್ನು ನಿರೀಕ್ಷಿಸುತ್ತೇನೆ.

ಶ್ರೀ ಬಿ. ಡಿ. ಜತ್ತಿಯವರು ಕೈಗೊಂಡಿರುವ ಬಸವತತ್ವಪ್ರಚಾರದ ಮತ್ತು ಮಾನವೋದ್ಧಾರದ ಮಹತ್ಕಾರ್ಯಕ್ಕೆ ನನ್ನ ಈ ಅಳಿಲುಸೇವೆ ಸಲ್ಲಲಿ, ಅವರು ಹಿಡಿದ ಬೃಹತ್ಕಾರ್ಯ ಗೆಲ್ಲಲಿ.

ಮೈಸೂರು
15-4-66

ಎಲ್. ಬಸವರಾಜು

# ಬಸವ ವಚನಾಮೃತ

ಉದಕದೊಳಗೆ ಬೈಚಿಟ್ಟ ಬೈಕೆಯು ಕಿಚ್ಚಿನಂತೆ ಇದ್ದಿತ್ತು !
[1]ಸಸಿಯೊಳಗಣ ರಸದ ರುಚಿಯಂತೆ ಇದ್ದಿತ್ತು !
ನನೆಯೊಳಗಳ ಪರಿಮಳದಂತೆ ಇದ್ದಿತ್ತು !
ಕೂಡಲಸಂಗಮ [3]ದೇವರ ನಿಲವು ಕನ್ನೆಯ ಸ್ನೇಹದಂತೆ ಇದ್ದಿತ್ತು 1

ಚಿತ್ಪರಮಲಿಂಗದ ಚಿದಂಶವಾದ ಆತ್ಮನು ಶಿವಾಜ್ಞೆಯಿಂದ ಜಡಪಿಂಡಸಂಬಂಧಿಯಾಗಿ ತನ್ನ ನಿಜವನ್ನು ಮರೆದಿರುವಲ್ಲಿ, ಆ ಆತ್ಮನ ನಿಜದ ನಿಲುವಾದ ಚಿತ್ಪರಮಲಿಂಗವು ಆ ಪಿಂಡರೂಪವಾದ ಆತ್ಮಾಂತರ್ಗತವಾಗಿ, ಜಡಪಿಂಡದಲ್ಲಿ ತದಾಕಾರವಾಗಿ ಗುಪ್ತದಲ್ಲಿರುವುದು. ಅದು ಹೇಗೆಂದರೆ, ದೃಷ್ಟಾಂತ:

1. ಶಿವಾಜ್ಞೆಯಿಂದ ಸಮುದ್ರದಲ್ಲಿ ವಡಬಾಗ್ನಿಯಿದ್ದು, ಆ ಸಮುದ್ರವನ್ನು ಗ್ರಹಿಸುವ ದೀಪನದೋರದೆ, ಜಲದಲ್ಲಿ ತದಾಕಾರವಾಗಿರುವಂತೆ ಚಿದಗ್ನಿ-ಸ್ವರೂಪವಾದ ಪರಮ ಲಿಂಗವು ಪಿಂಡದಲ್ಲಿದ್ದು ಆ ಪಿಂಡವನ್ನು ದಹಿಸದೆ ತದಾಕಾರವಾಗಿರುವುದು.

2. ಚಂದ್ರಮನೊಳಗಣ ಅಮೃತಕಿರಣವು ಆ ಅಮೃತದಿಂದ ಬೇರ್ಪಡಿಸಿ ತೋರದಂತೆ, ಪಿಂಡಮಧ್ಯದಲ್ಲಿರುವ ಅಮೃತರಸವನ್ನು ಬೇರ್ಪಡಿಸಿ ಚಿತ್ಪರಮಪ್ರಕಾಶ ಲಿಂಗವು ತೋರದು.

3. ಕಸುನನೆಯೊಳಗೆ ಸುವಾಸನೆದೋರದೆ ಇದ್ದ ಸುಗಂಧದಂತೆ, ಆ ಚಿತ್ಪರಮಲಿಂಗವು ಪಿಂಡಮಧ್ಯದಲ್ಲಿದ್ದು ತನ್ನ ಶಿವಸದ್ವಾಸನಾಜ್ಞಾನ ತಲೆದೋರದೆ ಆ ಪಿಂಡದಲ್ಲಿ ತದಾಕಾರವಾಗಿ ಅಡಗಿರುವುದು.

4. ವಿಷಯ ಸಂಗಸುಖದ ಋತುವಾಗದೆಯಿದ್ದ ಹಸುಳೆಯಲ್ಲಿ ಕಾಮವು ವ್ಯೆಗಾಣಿಸದೆ ಅಡಗಿ ಇರುವಂತೆ, ಚಿತ್ಪರಮಲಿಂಗದ ಸುಖಾನಂದವು ಪಿಂಡಸ್ಥವಾಗಿದ್ದು ವ್ಯೆಗಾಣಿಸದೆ ಇರುವುದು.

(ಕಲ್ಲುಮಠದ ಪ್ರಭುದೇವರ "ಲಿಂಗಲೀಲಾವಿಲಾಸ ಚಾರಿತ್ರ" ದಲ್ಲಿನ ವ್ಯಾಖ್ಯಾನ)

---

[1] (ಲಿ) (ಪ)
[2] ಶಶಿ (ಲಿ)
[3] (ಹ) (ಲಿ) ದೇವಾ (ಸ)

1. ಉದಕದಲ್ಲಿ ಅಗ್ನಿಯು ಗೋಪ್ಯವಾಗಿರುವ ಹಾಗೆ, ಸಂಸಾರರಸಸ್ವರೂಪವಾದ ಪಿಂಡದ ಮಧ್ಯದಲ್ಲಿ ಚಿದಗ್ನಿಸ್ವರೂಪವಾದ ಪರಬ್ರಹ್ಮವಡಗಿದ್ದು ಕುರುಹುಗಾಣಿಸದೆ ರಹಸ್ಯವಾಗಿರುವುದು.

2. ಚಂದ್ರಕಿರಣದೊಳಗಿರುವ ಅಮೃತವು ಆ ಕಿರಣದಿಂದ ಬೇರ್ಪಡಿಸಲು ಬಾರದ ಹಾಗೆ, ಪಿಂಡ [=ಜೀವಾತ್ಮ] ದಲ್ಲಿ ಮಾಧುರ್ಯಾಯಮಾನಸ್ವೀಕಾರ ಸ್ನೇಹರಸ ಸ್ವರೂಪವಾದ ಪರಬ್ರಹ್ಮವಡಗಿರುವುದು.

3. ಸಕಲ ತತ್ವ ಸಂಕೋಚಿತವಾದ ಪಿಂಡದ ಮಧ್ಯದಲ್ಲಿ ಸ್ವಾನುಭಾವ ಸದ್ವಾಸನಾ ಸ್ವರೂಪವಾದ ಪರಬ್ರಹ್ಮವಡಗಿರುವುದು.

4. ಎಲೆ ಪರಶಿವಲಿಂಗವೆ, ನವವರುಷದ ಕನ್ನಿಕೆಯಲ್ಲಿ ಕಾಮಾಭಿಮಾನವು ಗೋಪ್ಯವಾಗಿರುವ ಹಾಗೆ, ನವವಿಧಭಕ್ತಿಯ ಗೋಪ್ಯವನ್ನುಳ್ಳ ಪಿಂಡದ ಮಧ್ಯದಲ್ಲಿ ಪೂರ್ಣಜ್ಞಾನಾಭಿಮಾನಸ್ವರೂಪವಾದ ಪರಬ್ರಹ್ಮವಡಗಿದ್ದು ಕುರುಹುಗಾಣಿಸದೆ ರಹಸ್ಯವಾಗಿರುವುದು.

(ಬಸವನ ಬೆಡಗಿನ ವಚನಗಳಿಗೆ ಸೋಮಶೇಖರ ಶಿವಯೋಗಿಯ ವ್ಯಾಖ್ಯಾನ)

ಎತ್ತೆತ್ತ ನೋಡಿದರತ್ತತ್ತ ನೀನೇ ದೇವ !
ಸಕಲವಿಸ್ತಾರದ ರೂಹು ನೀನೇ ದೇವ!
[1]ವಿಶ್ವತೋಚಕ್ಷು ನೀನೇ ದೇವ![1]
[2]ವಿಶ್ವತೋಮುಖ ನೀನೇ ದೇವ[2]
[3]ವಿಶ್ವತೋಬಾಹು ನೀನೇ ದೇವ![3]
[4]ವಿಶ್ವತೋಪಾದ ನೀನೇ ದೇವ[4] ಕೂಡಲಸಂಗಮದೇವ! 2

ಬಸವಣ್ಣನವರಿಗೆ—ಶಿವನು ವಿಶ್ವಮಯವಾದರೆ ವಿಶ್ವವೂ ಶಿವಮಯ ! ಎಲ್ಲೆಡೆ ಅರಳಿ ಆವರಿಸಿರುವ ಶಿವದ ಕಣ್ಣಿನ ಕಾಂತಿಯಲ್ಲಿ ನಡೆದಾಡುವ ಅವರಿಗೆ, ಎಲ್ಲರ ಕಣ್ಣಿನಲ್ಲಿ ಶಿವಕಾಂತಿ ಕಾಣುವುದು. ಎಲ್ಲೆಡೆ ಅಭಿಮುಖವಾಗಿರುವ ಶಿವಮುಖದಲ್ಲಿ ಮಾತಾಡುವ ಅವರಿಗೆ, ಎಲ್ಲರ ಮುಖದಲ್ಲಿಯೂ ಶಿವಬಿಂಬ ಕಾಣುವುದು. ಎಲ್ಲೆಡೆ ತಮ್ಮನ್ನು ತಬ್ಬಿ ಹಬ್ಬಿರುವ ಶಿವಬಾಹುಗಳಲ್ಲಿ ತನ್ಮಯರಾಗಿರುವ ಅವರಿಗೆ, ಎಲ್ಲರ ಬಾಹುಲತೆಗಳಲ್ಲೂ ಶಿವಾಲಿಂಗನವೇ ಅನುಭವಕ್ಕೆ ಬರುವುದು. ಎಲ್ಲೆಡೆ ಅಂಕಿತವಾಗಿರುವ ಶಿವದ ಹೆಜ್ಜೆಯ ಗುರುತನ್ನೇ ಅನುಸರಿಸಿ ಗಮಿಸುವ ಬಸವಣ್ಣನವರಿಗೆ ಜಂಗಮ ಲೋಕದ ಪಾದಪರಿಚರ್ಯೆಯೇ ತಮ್ಮ ಪವಿತ್ರ ಚರ್ಯೆಯೆನಿಸುವುದು. ಎಲ್ಲವೂ ಶಿವನಲ್ಲಿರುವುದೆಂದು ಎಲ್ಲವನ್ನೂ ತಿರಸ್ಕರಿಸುವುದಲ್ಲ, ಎಲ್ಲದರಲ್ಲೂ ಶಿವನಿರುವನೆಂದು, ಎಲ್ಲವನ್ನೂ ಪುರಸ್ಕರಿಸುವುದೇ ನಿಜವಾದ ವಿಶ್ವರೂಪ ದರ್ಶನ. ಆದುದರಿಂದಲೇ ಬಸವಣ್ಣನವರು ಹೇಳಿರುವುದು : " ಎತ್ತೆತ್ತ ನೋಡಿದರತ್ತತ್ತ ನೀನೇ ದೇವ, ಸಕಲ ವಿಸ್ತಾರದ ರೂಹು ನೀನೇ ದೇವ " ಎಂದು.

---

[1]+[2]+[3]+[4] (ಸ)
[3]+[1]+[2]+[4] (ಹ)
[1]+[2]+[4]+[3] (ಖ)

ಜಗದಗಲ, ಮುಗಿಲಗಲ, ಮಿಗೆಯಗಲ ನಿಮ್ಮಗಲ !
ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ !
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮಕುಟ !
ಸಾಕ್ಷಿ:
[1]ಪಾದಾಭಿನ್ನಾಹಿಲೋಕಾಯ ಮೌಳಿಬ್ರಹ್ಮಾಂಡ ಭಿತ್ತಯೇ
ಭುಜಪ್ರಾಂತದಿಗಂತಾಯ ಭೂತಾನಾಂ ಪತಯೇ ನಮಃ ॥
ಅಗಮ್ಯ-ಅಗೋಚರ-ಅಪ್ರತಿಮ ಲಿಂಗವೇ
ಕೂಡಲಸಂಗಮದೇವಯ್ಯ,
ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ ![2] 3

ಹರನ ವಿರಾಡ್ರೂಪದ ಅದ್ಭುತ ಚಿತ್ರವನ್ನು ಬಸವಣ್ಣನವರು ತಮ್ಮ ಭಕ್ತಿಯ ಬಣ್ಣದಿಂದ ಇಲ್ಲಿ ಬಿಡಿಸಿರುವರು. ಹರನ ಹರಹು ಜಗದಗಲವೇ ? ಅಲ್ಲ ! ಅದು ಆ ಜಗತ್ತನ್ನು ಅನಾದಿ-ಅನಂತವಾಗಿ ಆವರಿಸಿರುವ ಮುಗಿಲಗಲವೇ ? ಅಲ್ಲ ! ಅದಕ್ಕೂ ಮಿಗಿಲಾದುದು ಎಂದು ಉಲ್ಲೇಖಿಸಿರುವರು. ಆ ಹರನ ಶ್ರೀ ಮಕುಟ ಅನಂತ ಬ್ರಹ್ಮಾಂಡದ ತುತ್ತತುದಿಯಿಂದತ್ತ ಹತ್ತು ಅಂಗುಲ ಆಚೆಗಿದೆ, ಅಲ್ಲಿಗೇರಲಾಗದು ನಮ್ಮಿಂದ. ಅವನ ಶ್ರೀ ಚರಣತಲವಾದರೋ ಅತಳ-ಪಾತಾಳದಿಂದತ್ತತ್ತ ನೆಲೆಸಿರುವುದು, ಅಲ್ಲಿಗಿಳಿಯಲಾಗದು ನಮ್ಮಿಂದ. ಅವನ ಅಭಯವರದಭುಜ ಪ್ರಾಂತವೋ ದಿಗ್ದಿಗಂತ ವಿಶ್ರಾಂತ! ಇಲ್ಲಿಂದಲ್ಲಿಗೆ ಹರಿದಾಡಲಾಗದು ನಮ್ಮಿಂದ. ಹೀಗಿರುವ ಅಗಮ್ಯ ಅಗೋಚರ ಅಪ್ರತಿಮ ಶಿವನನ್ನು ಭಜಿಸುವ ಬಗೆಯೆಂದರೆ—ತನ್ನ ವಿರಾಡ್ರೂಪವನ್ನು ಅಡಕವಾಗಿಸಿಕೊಂಡು ಕರತಲಾಮಲಕದಂತಿರುವ ಇಷ್ಟಲಿಂಗವನ್ನು ವಿರಾಡ್ರೂಪನ ಕೃಪಾರೂಪವೆಂದು ಉಪಾಸಿಸುವುದೊಂದೇ ! ಹೀಗೆ ಎಲ್ಲವನ್ನೂ ತನ್ನ ಮೈಯಲ್ಲಿ ಅಡಗಿಸಿಕೊಂಡಿರುವ ಮಹಾದೇವನನ್ನು ನನ್ನ ಕೈಯಲ್ಲಿ ಅಡಗಿಸಿಕೊಂಡಿರುವೆನೆಂಬುದೇ ವೀರಶೈವದ ವಿಶಿಷ್ಟಶಕ್ತಿ !!

---

[1] ಪಾದಭಿನ್ನಾಹಿಲೋಕಾನಾಂ ಮೌಳಿ ಬ್ರಹ್ಮಾಂಡ ಭಿತ್ತಯೋಃ
ಭುಜ ಪ್ರಾಂತ ದಿಗಂತಾನಾಂ ಭೂತಯೇ ಪತಯೇನಮಃ (ಚ)
ಶ್ರುತಿ: ಪಾದಾಭಿನ್ನಾಹಿಲೋಕಾನಾಂ ಮೌಳಿ ಬ್ರಹ್ಮಾಂಡ ಭಿತ್ತಯೇ
ಋಜು ಪ್ರಾಂತ ದಿಗಂತಾನಾಂ ಭೂತಾಯ ಪತಯೇನಮಃ ಎಂದು
ದಾಗಿ ಅಗಮ್ಯ ನಗೋಚರನಪ್ರತಿಮ ಲಿಂಗವೇ (ಏ)
ಸಾಕ್ಷಿ: ಪಾದಾ ಭಿನ್ನಾಹಿಲೋಕೇಸ ಮೌಳಿ ಬ್ರಹ್ಮಾಂಡ ಭಿತ್ತಯೆ
ಭುಜಪ್ರಾಂತ ದಿಗಂತಾನಾಂ ಭೂತಾನಾಂ ಪತಯೇ ನಮಃ॥
ಇಂತೆಂದುದಾಗಿ ಅಗಮ್ಯ ಅಗೋಚರ ಅಪ್ರತಿಮ ಲಿಂಗವೇ (ಸ್ವ)
[2] ನೀನೆನ್ನ ಕರಸ್ಥಅಕ್ಕೆ ಬಂದು ಚುಳುಕಾದೆ ಕೂಡಲಸಂಗಯ್ಯ (ಏ)

'ದೇವನೊಬ್ಬ'[1] ನಾಮ ಹಲವು!
ಪರಮ ಪತಿವ್ರತೆಗೆ ಗಂಡನೊಬ್ಬ!
ಹಲವು ದೈವದೆಂಜಲ ತಿಂಬವರನೇನೆಂಬೆ
ಕೂಡಲಸಂಗಮದೇವ. 4

ಶಿವ ವಿಷ್ಣು ಮುಂತಾದ ಹೆಸರುಗಳು ಹಲವಾದರೂ, ಆ ಹಲವಾರು ಹೆಸರುಗಳು ಅನ್ವಯಿಸುವ ದೇವನೊಬ್ಬನೇ—ಎನ್ನುವರು ಬಸವಣ್ಣನವರು. ಅನ್ಯದೇವತಾ ದೂಷಣೆಯಲ್ಲಿ ತೊಡಗದೆ, ತಮ್ಮ ತಮ್ಮ ಆತ್ಮೋನ್ನತಿಗೆ ಒಗ್ಗುವ ಒಂದು ದೇವರಲ್ಲಿ ನಿಶ್ಚಲವಾದ ನಿಷ್ಠೆಯಿರಬೇಕೆಂಬುದೇ ಅವರ ಆಗ್ರಹ. ದೇವರುಗಳೆಲ್ಲ ಒಂದೇ ಆದ ಮೇಲೆ, ಎಲ್ಲ ದೇವರನ್ನೂ ಉಪಾಸಿಸುವೆನೆಂಬುದರಿಂದ ಬದುಕು ಬರಿಯ ಬವಣೆಯಾಗುವುದು.

ಹಲವು ದೇವರುಗಳೆಂಬ ಬಿರಣಿಯನ್ನು ಆಯ್ದು ಒಟ್ಟುವುದರಲ್ಲೇ ಕಾಲವನ್ನೆಲ್ಲ ಕಳೆದು, ಅನುಭವದಡಿಗೆಯನ್ನು ಅಟ್ಟುಣ್ಣಲು ಬಿಡುವಿಲ್ಲವೆನ್ನುವಂತಾಗುವುದು ಎಷ್ಟು ಶೋಚನೀಯ! ಆ ದೇವರು ಈ ದೇವರೆಂದು ಸುತ್ತೆಲ್ಲ ಅಲೆಯುತ್ತ, ಏಕದೇವತೋಪಾಸನೆಯ ಸೂತ್ರಪಿಡಿಯದೆ, ಹೃದಯದಾಳಕ್ಕಿಳಿಯದೆ, ಸ್ವಸ್ಥವಾಗಿದ್ದು ಸಚ್ಚಿದಾನಂದ ಚಿಂತನರತ್ನಗಳನ್ನು ಎತ್ತದೆ ನಿರರ್ಥವಾಗುವ ಇಂತಹ ಜೀವರುಗಳನ್ನು ಕಂಡು ಬಸವಣ್ಣನವರು ವ್ಯಗ್ರಗೊಂಡಿರುವರು. ಪ್ರೇಮಜಗತ್ತಿನ ನಾನಾ ಭಾವನೆಗಳ ಸಾರಸರ್ವಸ್ವವನ್ನೂ ಸೂರೆಗೊಳ್ಳಲು ಸಾಧ್ವೀಶಿರೋಮಣಿಯು ಅವಲಂಬಿಸುವುದು ಒಬ್ಬನೇ ಒಬ್ಬ ಗಂಡನನ್ನಲ್ಲವೆ? ಹಲವರೆಡೆ ಹರಿದಾಡಿದ ಕುಲಟೆ ಇಹಜೀವನದ ತನಿಸುಖದಿಂದ ವಂಚಿತಳಾಗುವಳೆಂಬುದು ಎಲ್ಲರೂ ಕಂಡ ವಿಷಯವೇ ಆಗಿದೆ.

---

[1] ದೇವನೊಬ್ಬನೆ (ನಿ)

ಹಾಳು ಮೊರಡಿಗಳಲ್ಲಿ, ಊರ ದಾರಿಗಳಲ್ಲಿ
ಕೆರೆ-ಭಾವಿ-ಹೂಗಿಡು-ಮರಂಗಳಲ್ಲಿ, ಗ್ರಾಮಮಧ್ಯಂಗಳಲ್ಲಿ
ಚೌಪಥ-ಪಟ್ಟಣ ಪ್ರ[1]ವೇಶ[1]ದಲ್ಲಿ, ಹಿರಿಯಾಲದ ಮರದಲ್ಲಿ
ಮನೆಯ ಮಾಡಿ,
ಕರೆವೆಮ್ಮೆ–ಹಸುಗೂಸು–ಬಸುರಿ–ಬಾಣತಿ
ಕುಮಾರಿ–ಕೊಡಗೂಸೆಂಬವರ [2]ಹಿಡಿದುಂಬ[2] ತಿರಿದುಂಬ
ಮಾರಯ್ಯ–ಬೀರಯ್ಯ–ಕೇಚರ–ಗಾವಿಲ–ಅಂತರ–ಬೆಂತರ
ಕಾಳಯ್ಯ–[3]ಮಾಳಯ್ಯ–ದೂಳಯ್ಯ[3]–ಕೇತಯ್ಯಗಳೆಂಬ
ನೂರು ಮಡಕೆಗೆ [4]ನಮ್ಮ ಕೂಡಲ ಸಂಗಮದೇವಯ್ಯಗೆ
ಶರಣೆಂಬುದೊಂದೆ[4] ದಡಿ ಸಾಲದೆ ? 5

ದೈವಗಳೆಲ್ಲ ಮಾನವನ ಕಲ್ಪನಾಪ್ರತಿಮೆಗಳು. ಕಲ್ಪನೆ ಕುಬ್ಜವಾಗಿ ಕಲುಷಿತವಾಗಿದ್ದರೆ, ಆ ಪ್ರತಿಮೆಗಳೂ ವಿಕೃತವಾಗಿ ವಿಪನ್ನವಾಗಿರುವವು; ಉನ್ನತವಾಗಿ, ಉತ್ತಮವಾಗಿದ್ದರೆ, ಅವು ಗಭೀರವೂ ಸುಂದರವೂ ಸುಪ್ರಸನ್ನವೂ ಆಗಿರುವವು. ಕುಬ್ಜ ಕಲುಷಿತ ಪ್ರತಿಮೆಗಳಾದ ಕೋರೆ ಹಲ್ಲಿನ, ಕೆಂಪು ಮೋರೆಯ, ಬಿರುಗಣ್ಣಿನ ಮಾರಿ–ಮಸಣಿಗಳೆಂಬ ಕ್ಷುದ್ರ ದೇವತೋಪಾಸನೆಯಿಂದ ಮಾನವನ ಮನಸ್ಸಿನಲ್ಲಿ ಅವನ ಶಕ್ತಿಯನ್ನು ಉಡುಗಿಸುವ ಭೀತಿ ಸಂಚಾರವಾಗುವುದೇ ಹೊರತು, ಆತ್ಮೋದ್ಧಾರ ಕಾರ್ಯವಿಧಾನದ ರೀತಿನೀತಿಗಳ ಸಂದರ್ಶನವಾಗುವುದಿಲ್ಲ. ಬದಲಾಗಿ, ಅಂಧಕಾಸುರನನ್ನು ಮೆಟ್ಟಿ, ಹತ್ತೂ ಕಡೆಗೂ ಬಾಹುಗಳನ್ನು ಬೀಸಿ ದಿಗ್‌ದಿಗಂತಸ್ಪರ್ಶಿಯಾಗಿ. ತನ್ನ ಪ್ಲವನೋತ್‌ಪ್ಲವನಗಳಿಂದ ಭೂವ್ಯೋಮವ್ಯಾಪಿಯಾಗುವ ತಾಂಡವಮೂರ್ತಿಯಂತಹ ಉದಾತ್ತ ಕಲ್ಪನೆಯ ಉತ್ತಮ ಪ್ರತಿಮೆಗಳ ದರ್ಶನೋಪಾಸನೆಗಳಿಂದ ಮಾನವನ ಮನಸ್ಸು ತಾತ್ಕಾಲಿಕವಾಗಿ ತತ್ತರಿಸಿದರೂ, ಅಚಿರದಲ್ಲಿಯೇ ಭೂಮಾನಂತ ದಿವ್ಯಶಕ್ತಿಗಳು ಅವನ ಅಂತರಂಗಕ್ಕೆ ವಿದ್ಯುದ್ವೇಗದಲ್ಲಿ ನುಗ್ಗಿ ತುಂಬಿಕೊಳ್ಳುವವು !

ಆದುದರಿಂದಲೇ ಬಸವಣ್ಣನವರು ಪುಣ್ಯಜೀವ ನದೀಸಂಗಮಸ್ಥಾನಗಳಲ್ಲಿ, ಉನ್ನತ ಪರ್ವತಶೃಂಗಗಳಲ್ಲಿ, ನಿತ್ಯಹರಿದ್ವರ್ಣಾರಣ್ಯಗಳಲ್ಲಿ, ಮಹನೀಯರ ಪಾವನತರ ಕಾರ್ಯಕ್ಷೇತ್ರ ಪುಣ್ಯಕ್ಷೇತ್ರಗಳಲ್ಲಿ ಸುಪ್ರತಿಷ್ಠಿತವಾಗಿರುವ ಶಂಕರ–ಭವ್ಯಸುಂದರ–ದೇವತೆಗಳ ಉಪಾಸನೆಗಳತ್ತ ತಿರುಗಿರೆಂದು ಭಕ್ತರಿಗೆ ಕರೆ ನೀಡಿ; ಆಲದ ಮರ, ಹಾಳು ಮೊರಡಿ, ಊರ ದಾರಿ, ಕೋಟೆ ಬಾಗಿಲು, ಧೂಳಿನ ಬೀದಿಗಳಲ್ಲಿ ಬೀಡುಬಿಟ್ಟು,

---

[1] (ಚ) (ನಿ) (ಕ) ದೇಶ (ಹ) (ಸ). [2] ಹಿಡಿದು (ಚ) ಹಿಡಿದು ತಿಂಬ (ಸ). [3] ಮಾರಯ್ಯ—ಮಾಳಯ್ಯ *(ಹ)*, ಮಾಳಯ್ಯ (ಚ). [4] ನಮ್ಮ ಕೂಡಲ ಸಂಗಮದೇವ ಶರಣೆಂಬುದೊಂದು *(ಸ) (ಹ)*.

ಕರಿವ ಎಮ್ಮೆಯ ಕೆಚ್ಚಲನ್ನು ಬತ್ತಿಸಿ, ಹಸುಗೂಸಿಗೆ ವಾಯುಬಡಿಸಿ, ಬಸುರಿಗೆ ಮೈಯಿಳಿಸಿ, ಬಾಣತಿಗೆ ಸನ್ನಿಬರಿಸಿ, ಸಣ್ಣ ಹೆಣ್ಣುಮಕ್ಕಳಿಗೆ ಲತ್ತೆ ಬಡಿಸಿ—ಊರ ಜನರನ್ನು ಭಯಪಡಿಸಿ, ಕಾಡಿ ಬೇಡಿ ಹೊಟ್ಟೆ ಹೊರೆದುಕೊಳ್ಳುತ್ತಿರುವ ಮಾರ–ಬೀರ–ಕಾಳ–ಧೂಳ ಮುಂತಾದ ಕ್ಷುದ್ರ ದೇವತೆಗಳನ್ನು ದೂರವಿರಿಸಿರೆಂದು ಒತ್ತಾಯ ಮಾಡಿರುವರು. ಮೇಲಾಗಿ, ಆ ಕ್ಷುದ್ರ ದೇವತೆಗಳ ಉಪಟಳವನ್ನು ತಪ್ಪಿಸಿ ಒಪ್ಪವಾಗಿ ನಮ್ಮನ್ನು ಕಾಪಾಡುವ ಸರ್ವಶಕ್ತನೆಂದರೆ ಶಿವನೊಬ್ಬನೇ ಎಂದೂ ಧೈರ್ಯ ಹೇಳಿರುವರು.

ಹಾವಿನ ಬಾಯ ಕಪ್ಪೆ ಹಸಿದು
[1]ತಾ[1] ಹಾರುವ ನೊಣಕಾಶೆ ಮಾಡುವಂತೆ
ಶೂಲವನೇರುವ ಕಳ್ಳ ಹಾಲು ತುಪ್ಪವ ಕುಡಿದು
[2]ಮೇಲಿನ್ನೇಸು[2] ಕಾಲ ಬದುಕುವನೋ ?
ಕೆಡುವೊಡಲ ನೆಚ್ಚಿ
ಕಡು ಹುಸಿಯನೇ ಹುಸಿದು
ಒಡಲ ಹೊರೆವರ [3]ಮೆಚ್ಚ
ನಮ್ಮ ಕೂಡಲ[3]ಸಂಗಮದೇವ[3] ! 6

ತಾಯಿ ಹೆರುವುದಕ್ಕೆ ಮೊದಲೇ ನಮ್ಮನ್ನು ಮೃತ್ಯು ಮುಟ್ಟಿರುವುದು. ಯಾವಾಗ ಆ ಹೆಡತಲೆಯ ಮೃತ್ಯು ನಮ್ಮನ್ನು ನುಂಗಿ ನೊಣೆಯುವುದೋ ತಿಳಿಯದು. ಹೀಗೆ ಸಾವಿನ ಕಟವಾಯಲ್ಲಿ ಸದಾ ನೇತಾಡುತ್ತಿರುವ ನಾವು, ಈ ಜೀವನದ ಅಲ್ಪಸುಖಗಳಿಗಾಗಿ ಹಾತೊರೆದು, ಈಗಲೋ ಆಗಲೋ ಹಾಳಾಗುವ ಈ ದೇಹರಕ್ಷಣೆಗಾಗಿ ಸುಳ್ಳು–ಸೋಗುಗಳನ್ನು ಬಳಸುವುದು ಬುದ್ಧಿವಂತಿಕೆಯಲ್ಲ. ಹಾವು ಹಿಂದಿನಿಂದ ಸದ್ದಿಲ್ಲದೆ ಸರಿದುಬಂದು ಕಪ್ಪೆಯನ್ನು ಹಿಡಿದಿರುವಾಗ, ಆ ಕಪ್ಪೆ ತನ್ನ ಮುಂದಿರುವ ನೊಣವನ್ನು ಹಿಡಿಯುವ ಆಶೆಯಿಂದ ನಾಲಗೆಯನ್ನು ಹವಣಿಸಿದರೆ ಅದು ಶೋಚನೀಯ ! ಆ ಕಪ್ಪೆಯಿನ್ನೆಷ್ಟು ಕಾಲ ಜೀವಿಸಿದ್ದೀತು—ಅದಿನ್ನೇನು ಸುಖವನ್ನನುಭವಿಸೀತು ! ಶಿಕ್ಷೆಗೊಳಗಾದ ಕಳ್ಳನೋರ್ವನು, ಇನ್ನೇನು ಶೂಲವೇರಿ, ದೇಹ ಕುಸಿದು, ರಕ್ತ ಬಸಿದು, ಸತ್ತು ಹೋಗುವುದಕ್ಕೆ ಅರೆಕ್ಷಣವಿರುವಾಗ, ತನ್ನ ಕೊನೆಯ ಬಯಕೆಯೆಂದು ಹಾಲು ತುಪ್ಪವನ್ನು ಕೇಳಿ ಕುಡಿದರೆ, ಅವನ ಆ ವರ್ತನೆ ಶೋಚನೀಯ ! ಲಾಲಸೆಯತ್ತ ನಾಲಗೆ ಚಾಚಿ, ಇಂತಹ ಘೋರ ವಿಪನ್ನಾವಸ್ಥೆಯಲ್ಲಿರುವ ಜೀವಕೋಟಿಯನ್ನುದ್ದೇಶಿಸಿ—ಸರ್ವನಾಶವಾಗಬೇಡಿ, ಆತ್ಮದತ್ತ ಅವಧಾನವಿರಲೆಂದು ಬಸವಣ್ಣನವರು ತಿಳುವಳಿಕೆ ಹೇಳುತ್ತಿರುವರು.

---

[1] (ಹಸು) x (ಅನ್ಯತ್ರ). [2] (ಚ) ಮೇಲೇಸು (ಅನ್ಯತ್ರ). [3] (ಕ) ಕೂಡಲ ಸಂಗಮದೇವನವರನೊಲ್ಲ ಕಾಣಿರಣ್ಣ (ಹಸು) (ಸ) (ಹಳ).

ನೀನೊಲಿದರೆ ಕೊರಡು ಕೊನರುವುದಯ್ಯ !
ನೀನೊಲಿದರೆ ಬರಡು ಹಯನಹುದಯ್ಯ !
ನೀನೊಲಿದರೆ [1]ವಿಷವಮೃತವಹುದಯ್ಯ ![1]
ನೀನೊಲಿದರೆ ಸಕಲ-ಪಡಿ-ಪದಾರ್ಥ [2]ಇದಿರಲ್ಲಿಪ್ಪವು ![2]
ಕೂಡಲಸಂಗಮದೇವ. 7

ಅನುಕೂಲ ಸನ್ನಿವೇಶ ಪರಿಸರಣಗಳಲ್ಲಿ ನಮ್ಮ ವಾಂಛೆ ಅಭೀಷ್ಟಗಳೆಲ್ಲಾ ಹೂವಿನ ಹಾರವನ್ನು ಎತ್ತಿದಂತೆ ಹಗುರವಾಗಿ ಕೈಗೂಡುವವು. ಆದರೆ ಅನುಕೂಲ ಸನ್ನಿವೇಶ ಪರಿಸರಣಗಳು ನಮ್ಮ ಕಾರ್ಯಸಮಯಕ್ಕೆ ಸರಿಯಾಗಿ ಒದಗಿ ಬರುವುದು ಬಹಳ ಅಪರೂಪ. ಅವು ಹಲವು ಮುಖವಾಗಿದ್ದು, ಹಲವು ವಿರುದ್ಧ ಶಕ್ತಿ ಸಂಚಾಲಿತ ವಾಗಿರುವುದರಿಂದ ನಮ್ಮ ಅವಶ್ಯಕತೆಗೆ ಹೊಂದಿಕೊಂಡು ಬರುವುದು ಕಡುಕಷ್ಟ. ಎಷ್ಟೋ ವೇಳೆ ನಮ್ಮ ಯೋಚನೆ ಯೋಜನೆ ಹಂಚಿಕೆ ಹವಣಿಕೆಗಳಿಗೆ ಅವು ಅನುವಾಗಿ ಬರದೆ, ನಾವು ಭಾರಿ ಅಪಜಯವನ್ನು ಅನುಭವಿಸುತ್ತೇವೆ. ನಮ್ಮ ರೊಟ್ಟಿ ತುಪ್ಪಕ್ಕೆ ಬಿದ್ದಂತೆ, ನಾವು ಒಂದು ಕಾರ್ಯವನ್ನು ಕೈಗೆತ್ತಿಕೊಳ್ಳುವುದಕ್ಕೂ, ಅದರ ಪೂರೈಕೆಗೆ ಅನುಕೂಲ ವಾತಾವರಣವೇರ್ಪಡುವುದಕ್ಕೂ ಹೊಂದಾವಣಿಕೆಯಾಗುವುದು ಎಲ್ಲೋ ಕೆಲವು ವೇಳೆ ಮಾತ್ರ ! ಕಾರ್ಯಶೀಲನ ಜೀವನದಲ್ಲಿ ಒದಗುವ ಇಂಥ ಅಮೃತ ಘಳಿಗೆಗಳು ಬಹಳ ಯಾದೃಚ್ಛಿಕವಾದುದರಿಂದಲೇ . ಅವು ಶಿವಕೃಪಾ ಸಂಪ್ರಾಪ್ತ ವಾದುವೆಂದು ಬಸವಣ್ಣನವರು ಭಾವಿಸುವರು. ಆದುದರಿಂದಲೇ ಅವರು ಹೇಳು ವುದು—ಶಿವನೊಲಿದರೆ ನಾವು ಅಸಾಧ್ಯವೆಂದು ಎದೆಗುಂದಿದ್ದ ಕಾರ್ಯಗಳೂ ಕೈಗೂಡುವವೆಂದು. ಕೊರಡು ಕೊನರುವ, ಬರಡು ಹಯನಾಗುವ, ವಿಷವು ಅಮೃತವಾಗುವ ಪ್ರಕೃತಿ-ವಿರುದ್ಧ ಮತ್ತು ಲೋಕವಿರುದ್ಧ ಪರಿವರ್ತನೆಯ ಕ್ರಿಯೆಗಳೂ ಪವಾಡಗಳಂತೆ ಕ್ಷಣಾರ್ಧದಲ್ಲಿ ಜರುಗಿ ಹೋಗುವವು. ಜರುಗುವ ಕಾಲ ಬಂದಾಗ ವಿರೋಧ ವಿಘ್ನಗಳೆಲ್ಲ ಅರಗಾಗಿ ಹೋಗಿ, ನಮ್ಮ ಕಾರ್ಯಗಳು ಮೆರಗಾಗುವವು. ಇದೆಲ್ಲಕ್ಕೂ ಬೇಕಾದುದು ದೇವರೊಲಿಮೆ ಮತ್ತು ಅವನ ಆ ಒಲುಮೆಯನ್ನು ಆಕರ್ಷಿಸುವಷ್ಟು ನಿಸ್ವಾರ್ಥವೂ, ಸದರ್ಥವೂ ಆದ ನಮ್ಮ ನಿಲುಮೆ.

---

[1] ವಿಷವೆಲ್ಲಾ ಅಮೃತವಹುದಯ್ಯ (ಸಿ) (ಕ) (ಹ)
ವಿಷವೆ ಅಮೃತವಹುದಯ್ಯ (ಸ)

[2] ಇದಿರಲಿರ್ಪುವು (ಸ) ಇದಿರಲ್ಲಿಪ್ಪವು

ನಂಬರು ನೆಚ್ಚರು, ಬರಿದೆ ಕರೆವರು
ನಂಬಲರಿಯರೀ ಲೋಕದ ಮನುಜರು !
ನಂಬಿ 'ಕರೆದಡೋಯೆನ್ನನೇ'[1] ಶಿವನು !
ನಂಬದೆ ನೆಚ್ಚದೆ ಬರಿದೆ ಕರೆವರ
ಕೊಂಬ ಮೆಟ್ಟಿ ಕೂಗೆಂದ ಕೂಡಲ ಸಂಗಮದೇವ ! 8

ಈ ಲೋಕದ ಜನರು ದಿವ್ಯಪಿಪಾಸೆಯ ಅದಮ್ಯ ಪ್ರೇರಣೆಯಿಲ್ಲದೆ, ನಂಬದೆ ನೆಚ್ಚದೆ ಸುಮ್ಮನೆ ಗತಾನುಗತಿಕವಾಗಿ, ಪ್ರದರ್ಶನಕ್ಕಾಗಿ, ದೇವರೇ ದೇವರೇ ಎಂದು ಬಾಯ್ ಬಿಟ್ಟು ಕೂಗುವರು. ಈ ಗದ್ದಲಕ್ಕೆ ದೇವರು ಒಲಿದು ಬರುವನೇ ? ದೂರ ದೂರವಾಗುವನು ! ಜಿಗುಪ್ಸಿತನಾಗಿ ದೂರ ಸರಿದು ಕಣ್ಮರೆಯಾಗುತ್ತಿರುವವನನ್ನು ಆಕರ್ಷಕ ಗುಣವಿಲ್ಲದವನು ತನ್ನತ್ತ ತಿರುಗಿಸಲೆಂದು ಕೊಂಬನ್ನು ಊದಿ ಅಥವಾ ಮರವೇರಿ ದನಿಯೇರಿಸಿ—ಕೂಗುವಂತೆ, ದೇವರಲ್ಲಿ ವಿಶ್ವಾಸವಿಲ್ಲದವನು ದೇವರ ನಾಮವನ್ನು ಎಷ್ಟು ಉಚ್ಚ ಸ್ವರದಲ್ಲಿ ಉಚ್ಚರಿಸಿದರೇನು ದೇವರು ಮೊಗದೋರು ವುದಿಲ್ಲ.

ದೇವರನ್ನು ಹೆತ್ತ ತಂದೆಯೆಂದು ನಂಬಿ ಉಪಾಸಿಸಿದ [ಭಕ್ತ ಶ್ರೇಷ್ಠ] ನಂಬಿಯೆಂಬವನು ದೇವರನ್ನು ಅನನ್ಯತೆಯಿಂದ ಕರೆದಾಗ, ದೇವರು ಓಗೊಟ್ಟ ಕಥೆಯೊಂದಿದೆ. ಹಾಗೆ ಭಕ್ತನಾದವನು ನಂಬಿರಬೇಕು, ನಂಬಿಯಂತಿರಬೇಕು. ಆಗಲೇ ದೇವರು ನಂಬಿಗೆ ಒಲಿದು ಓಗೊಟ್ಟಂತೆ, ಭಕ್ತರಿಗೆ ಒಲಿದು ಓಗೊಡುವನು, ಒಡಗೂಡುವನು ಕಡೆಗೆ ಒಳಗೂಡುವನು.

---

[1] ಕರೆದಡೆ ಓ ಎನ್ನನೆ (ಹ) (ಸ)

ನಾದಪ್ರಿಯ ಶಿವನೆಬಂರು ನಾದಪ್ರಿಯ ಶಿವನಲ್ಲಯ್ಯ !
ವೇದಪ್ರಿಯ ಶಿವನೆಂಬರು ವೇದಪ್ರಿಯ ಶಿವನಲ್ಲಯ್ಯ !
ನಾದವ ಮಾಡಿದ ರಾವಣಂಗೆ ಅರೆಯಾಯುಷವಾಯಿತ್ತು !
ವೇದವನೋದಿದ ಬ್ರಹ್ಮನ ಶಿರ ಹೋಯಿತ್ತು !
ನಾದಪ್ರಿಯನೂ ಅಲ್ಲ ! ವೇದಪ್ರಿಯನೂ ಅಲ್ಲ ! !
"ಭಕ್ತಿಪ್ರಿಯ"[1] ನಮ್ಮ ಕೂಡಲ ಸಂಗಮದೇವ. 9

ಜನರು ಶಿವನನ್ನು ನಾದಪ್ರಿಯನೆಂದೂ ವೇದಪ್ರಿಯನೆಂದೂ ಭ್ರಮಿಸಿ, ಹಾಡಿ ವೇದಘೋಷಮಾಡಿ ಪೂಜಿಸುವರು. ಅವರ ಹಾಡು ಸುಮಧುರವಾಗಿರಬಹುದು. ವೇದಘೋಷ ಗಂಭೀರವಾಗಿರಬಹುದು; ಆದರೇನು ಅಷ್ಟರಿಂದಲೇ ಮರುಳಾಗುವನೇ ಅಂತರ್ಯಾಮಿ ಶಿವನು ? ಅವನು ಕೇವಲ ಹಾಡಿನಿಂದ ಒಲಿಯುವನಾಗಿದ್ದರೆ, ಇಂಪಾಗಿ ಹಾಡಿದ ರಾವಣನೇಕೆ ಮಧ್ಯವಯಸ್ಸಿನಲ್ಲಿಯೇ ಮರಣ ಹೊಂದಿದ ? ಅವನು ಕೇವಲ ವೇದೋಚ್ಚಾರಣೆಯಿಂದಲೇ ಒಲಿಯುವನಾಗಿದ್ದರೆ, ವೇದ ಹೇಳಿದ ಬ್ರಹ್ಮನೇಕೆ ತಲೆಯನ್ನು ಕಳೆದುಕೊಂಡ ? ಶಿವನು ನಾದಪ್ರಿಯನೂ ಅಲ್ಲ ವೇದಪ್ರಿಯನೂ ಅಲ್ಲ. ಅವನಿಗೆ ಪ್ರಿಯವಾದುದು ಭಕ್ತಿಯೊಂದೇ.

ರಾವಣನಿಗೆ ನಾದವಿದ್ಯೆಯಿತ್ತು, ಭಾವಾವೇಶವಿತ್ತು, ಸದ್‌ಬುದ್ಧಿಯಿರಲಿಲ್ಲ. ಬ್ರಹ್ಮನಿಗೆ ವೇದ ಕಲೆಯಿತ್ತು, ಬುದ್ಧಿಬಲವಿತ್ತು, ಭಾವಾವೇಶವಿರಲಿಲ್ಲ. ಆದರೆ ಅವರೊಬ್ಬರಲ್ಲೂ ಭಾವ-ಬುದ್ಧಿಗಳೆರಡರ ಬೆಸುಗೆಯಿರಲಿಲ್ಲ, ಬೆಸೆಯುವ ಭಕ್ತಿ-ಬಿಂದುವಿರಲಿಲ್ಲ ! ಭಕ್ತರು ಇದನ್ನು ಗಮನಿಸಬೇಕು.

---

[1] 'ಭಕ್ತಪ್ರಿಯ' (O.R.I.)

ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ
ಹರದ ಕುಳಿರ್ದ ನಮ್ಮ ಮಹದೇವಸೆಟ್ಟಿ!
ಒಮ್ಮನ'ವಾದರೆ' ಒಡನೆ ನುಡಿವನು!
ಇಮ್ಮನ'ವಾದರೆ' ನುಡಿಯನು!!
ಕಾಣಿಯ ಸೋಲ, ಅರ್ಧಗಾಣಿಯ ಗೆಲ್ಲ!
ಜಾಣ ನೋಡವ್ವ ನಮ್ಮ ಕೂಡಲ ಸಂಗಮದೇವ! 10

ಭೂಲೋಕದಲ್ಲಿ ಎಲ್ಲರೂ ನೆಮ್ಮದಿಯಿಂದ ಬಾಳಲು ಬೇಕಾದಷ್ಟಿದೆ! ಬೇಳೆ–ಬೆಲ್ಲ–ಏಲಕ್ಕಿ, ಎಣ್ಣೆ–ಬೆಣ್ಣೆ, ಹಾಲು–ಜೇನು–ಹಣ್ಣು, ಹೂವು–ಗಂಧ, ಹತ್ತಿ–ಉಣ್ಣೆ–ರೇಷ್ಮೆ, ವಜ್ರ–ವೈಡೂರ್ಯ, ಚಿನ್ನದದಿರು–ಬೆತ್ತ–ಬಿದಿರು, ಅನ್ನ–ದೇವಾನ್ನ–ಪರಮಾನ್ನ ಸಕಲ ಸಾಮಗ್ರಿ ಸಂಬಾರವಿಶಿಷ್ಟವೂ ಇದೆ! ತವನಿಧಿಯಾಗಿ ತುಂಬಿದೆ, ಓರಣವಾಗಿ ಜೋಡಿಸಿದೆ, ಒಟ್ಟಿಲಾಗಿ ಸುರಿದಿದೆ! ಇದೊಂದು ಅಂಗಡಿ! ದೇವರಿಟ್ಟಿರುವ ದೊಡ್ಡ ಅಂಗಡಿ!! ಅಲ್ಲಿ ಸಲ್ಲುವ ನಾಣ್ಯವೆಂದರೆ ದುಡಿಮೆ, ಸತ್ಯ ಶುದ್ಧ ಕಾಯಕ! ಅಲ್ಲಿನ ವ್ಯವಹಾರದ ನಿರ್ಣಾಯಕ ಸೂತ್ರವೆಂದರೆ "ಲಾಭವಿಲ್ಲ ನಷ್ಟವಿಲ್ಲ". ಕೊಳ್ಳುವರಿಗೆ ನಷ್ಟಮಾಡಿ ತಾನು ಲಾಭಗಳಿಸುವ ಲಾಭಕೋರನಲ್ಲ, ಕಾಳಸಂತೆಕಾರನಲ್ಲ ದೇವರು! ಅವನು ಲೋಕವನ್ನು ವಂಚಿಸಿ ತಾನೇನನ್ನೂ ಗಳಿಸನು, ಮತ್ತು ತನ್ನನ್ನು ವಂಚಿಸುವ ಲೋಕಕ್ಕೇನನ್ನೂ ಸಲಿಸನು. ಅವನು ಲೋಕದ ಶೆಟ್ಟಿಯಂತೆ ಕೃಪಣಕುತಂತ್ರ ಜಾಣನಲ್ಲ. (ಇತರರನ್ನು ವಂಚಿಸುವ ರಭಸದಲ್ಲಿ ತಾನೇ ವಂಚಿತನಾಗುವವನೇತರ ಜಾಣ)? ದೇವರು "ದುಡಿದಷ್ಟು ಪಡಿ" ಯೀವ ಸಮತೋಲನ ವಿತರಣ ಜಾಣ, ಕಡು ಜಾಣ! ಈ (ಲೀಲಾ) ವ್ಯವಹಾರದಲ್ಲಿ ಅರ್ಧ ಕಾಸಿನಷ್ಟು ಲಾಭವನ್ನಾದರೂ ಗಳಿಸಲೊಲ್ಲದ ದೇವರು, ಕಾಸಿನಷ್ಟು ನಷ್ಟವನ್ನಾದರೂ ಏಕೆ ಸಹಿಸಿಯಾನು?. ಅವನ ಅಂಗಡಿಯಲ್ಲಿ "ಲಾಭವಿಲ್ಲ ನಷ್ಟವಿಲ್ಲ" ಕೊಳ್ಳುವವನಿಗಾಗಲಿ, ಕೊಡುವವನಿಗಾಗಲಿ! ಈ ಒಪ್ಪಂದದ ಒಮ್ಮನಿಸ್ಸಿದ್ದರೆ, ಆ ದೇವರಿಗೂ ಈ ಜೀವರಿಗೂ ಈ ಲೋಕದಂಗಡಿಯಲ್ಲಿ ವ್ಯವಹಾರ, ಇಲ್ಲದಿದ್ದರೆ ಉಪಸಂಹಾರ!

---

[1] 'ವೆಂದರೆ' (O.R.I.) (ಚ)

ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ ?
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ ತುಂಬಿ,
ಮನೆಯೊಳಗೆ 'ಮನೆಯೊಡೆಯನಿಲ್ಲ ![1]
ತನುವಿನೊಳಗೆ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ,
ಮನೆಯೊಳಗೆ 'ಮನೆಯೊಡೆಯನಿಲ್ಲ ![2]
ಕೂಡಲಸಂಗಮದೇವ. 11

ಮನೆಯೆಂದಮೇಲೆ ಮನೆಯೊಡೆಯನೊಬ್ಬನಿರಬೇಡವೇ ? ಇರಬೇಕು, ಇರಬಹುದು ! ಇರಲೇಬೇಕೆಂಬುದೇನು ? ದೆವ್ವವಿದೆಯೆಂದೋ, ದುಷ್ಟರ ಧಾಳಿಯಾಗುವುದೆಂದೋ, ದಟ್ಟದಾರಿದ್ರ್ಯ ಬಂತೆಂದೋ ಯಜಮಾನ ಬಿಟ್ಟುಹೋದ ಮನೆಗಳೆಷ್ಟಿಲ್ಲ ?!

ಅವನು ಬಿಟ್ಟು ಹೋದ ಮೇಲೆ ಆ ಮನೆ ಪಾಳುಮನೆ ! ಅಲ್ಲಿ ಬೀಡುಬಿಟ್ಟಿರುವುದು ಪ್ರೇತ–ಪೀಡೆ–ಭೂತ––ಪಿಶಾಚ ! ಆದರೂ ಅದು ದೂರಕ್ಕೆ ಸದ್ಗೃಹಸ್ಥರಿರುವ ಶುಭ ಗೃಹವೆಂದೇ ತೋರುವುದು !!

ದೂರದ ದಾರಿ ನಡೆದು ಬಾಯಾರಿದ ಪಾಂಥನೊರ್ವನು ನೀರಿಗೆಂದು ಆ ಮನೆಯ ಬಳಿ ಬಂದು, ಬಾಗಿಲಲ್ಲಿ ನಿಂದು, "ಮನೆಯೊಳಗೆ ಮನೆಯೊಡೆಯರಿದ್ದಾರೆಯೋ" ಎಂದು ಕೂಗಿ ಕರೆಯುವವನು, ತನ್ನ ಧ್ವನಿ ತನಗೇ ಪ್ರತಿಧ್ವನಿಯಾಗಿ ತಟ್ಟಿತೇ ಹೊರತು, ಒಳಗಿನವರ ಧ್ವನಿ ಯಾವುದೂ ತನ್ನನ್ನು ಸ್ವಾಗತಿಸುವುದಿಲ್ಲ. ಕಣ್ ತಗ್ಗಿಸಿ ಹೊಸ್ತಿಲ ಕಡೆ ನೋಡುವನು. ಅಲ್ಲೆಲ್ಲ ಹುಲ್ಲು ಬೆಳೆದಿದೆ. ಹಾರೂಡೆದ ಬಾಗಿಲಲ್ಲಿ ಬಗ್ಗಿ ಸಂಶಯದಿಂದ ನೋಡುವನು : ಒಳಗೆಲ್ಲ ಜೇಡ ಬಲೆ ಬೀಸಿದೆ, ಕಸ ತುಂಬಿದೆ. ಆಗ ಆವನಿಗೆ ಸಂಶಯ ಉಳಿಯಲಿಲ್ಲ ! ಭಯ ಮೊಳೆಯದಿರಲಿಲ್ಲ ! ಮನೆಯೊಡೆಯರಿದ್ದಾರೆಯೋ ಎಂದು ಮತ್ತೊಮ್ಮೆ ಕೂಗಲಿಲ್ಲ ಅದು ! ಮನೆಯೊಡೆಯನಿಲ್ಲದ ಪಾಳುಮನೆಯೆಂದು ನಿಶ್ಚಯವಾಯಿತು ! ಅಲ್ಲಿ, ಬಾಯಾರಿಕೆಯನ್ನು ನೀಗಿಕೊಳ್ಳಲು ನೀರು ಸಿಕ್ಕುವುದಿರಲಿ, ತುಂಬಿಕೊಂಡಿದ್ದ ಭೂತಗಳ ಚೇಷ್ಟೆಯಿಂದ ಪ್ರಾಣವೆಲ್ಲಿ ನೀಗಿ ಹೋಗುವುದೋ ಎಂದು ಹತಾಶನಾದ ಆ ಪಾಂಥನು ಭಯಕಂಪಿತನಾಗಿ ಕಾಲಿಗೆ ಬುದ್ಧಿ ಹೇಳುವನು.

ಹಾಳುಮನೆಗೆ ಹೇಳಿದ ಈ ಮಾತೇ ಮಾನವನ ಮೈಗೂ ಹೋಲುವುದು. ಮೈಯ ಹೊರ ಅಂಗಳದಲ್ಲಿ ಹುಸಿ, ಒಳ ಅಂಗಳದಲ್ಲಿ ವಿಷಯ ವಾಸನೆ ತುಂಬಿದ್ದ ಮೇಲೆ, ಆ ಹೀನ ಮಾನವನು ಪಾಳು ಮನೆಗಿಂತ ಕೀಳು ! ಅಂಥವನತ್ತ ಪರಮಾತ್ಮನ ಸೆರಗಿನ ಗಾಳಿಯೂ ಸುಳಿಯುವುದಿಲ್ಲ ! ಅಂಥವನ ಬಹಿರಂತರ್ದೇಹ ದೇವರ ಗೇಹವಾಗಿರದೆ ಪಂಚಭೂತವಿಕಾರಗಳ ವಂಚನಾಗಾರವಾಗಿರುವುದು !!

---

[1] (ಜ) ಮನೆಯೊಡಯನಿದ್ದಾನೋ ಇಲ್ಲವೋ (ಸ) (ಹಳ)

[2] ಮನೆಯೊಡೆಯನಿದ್ದಾನೋ ಇಲ್ಲವೋ ಇಲ್ಲ (ನಿ)

ಕಾಮವೇಕೋ ಲಿಂಗಪ್ರೇಮಿಯೆನಿಸುವಂಗೆ ?
ಕಾಮವೇಕೋ ಶರಣವೇದ್ಯನೆನಿಸುವಂಗೆ ?
ಲೋಭವೇಕೋ ಭಕ್ತಿಲಾಭವ ಬಯಸುವಂಗೆ ?
[1]ಮೋಹವೇಕೋ ಪ್ರಸಾದವೇದ್ಯನೆನಿಸುವಂಗೆ ?[1]
ಮದಮತ್ಸರವುಳ್ಳವಂಗೆ ಹೃದಯ ಶುದ್ಧವೆಲ್ಲಿಯದೋ ?
[2]ಹದುಳಿಗರಾದಲ್ಲಿಪ್ಪ[2] ಕೂಡಲಸಂಗಮದೇವ ! 12

ದೇವರನ್ನು ಶರಣಸತಿ–ಲಿಂಗಪತಿಯೆಂಬ ಸೂತ್ರದ ಪ್ರಕಾರ ಪ್ರೇಮಿಸುವವರಿಗೆ ಇತರ ಕಾಮನೆಗಳು ಸಲ್ಲವು. ಶರಣರ ಪರೀಕ್ಷೆಯ ಒರೆಗಲ್ಲಿಗೆ ಸಿಕ್ಕಿ ತೇರ್ಗಡೆಯಾಗ ಬೇಕಾದರೆ—ಕೋಪ ಕೂಡದು. ಭಕ್ತಿಯ ಲಾಭದಲ್ಲಿ ಆಶೆಯಿದ್ದರೆ ಇತರ ವಿಷಯ ಗಳ ಮೇಲೆ ಲೋಭವಿರಬಾರದು. ಪ್ರಸಾದ (ಪ್ರಸನ್ನ) ಗುಣ ಅಳವಡಬೇಕಾದರೆ ಮೋಹದಿಂದ ದೂರವಿರಬೇಕು. ಮದಮತ್ಸರವಿದ್ದವರಿಗೆ ಹೃದಯಶುದ್ಧಿಯ ಸುದ್ದಿ ದೂರ. ಹದವಾದವರಲ್ಲಿ ಮಾತ್ರ ಶಿವನು ನೆಲೆಯಾಗಿ ನಿಲ್ಲುವನು.

ಎನ್ನ ನಡೆಯೊಂದು ಪರಿ !
ಎನ್ನ ನುಡಿಯೊಂದು ಪರಿ !
ಎನ್ನೊಳಗೇನೂ ಶುದ್ಧವಿಲ್ಲ ನೋಡಯ್ಯ !
ನುಡಿಗೆ ತಕ್ಕ ನಡೆಯ ಕಂಡರೆ
ಕೂಡಲಸಂಗಮದೇವ ತನ್ನೊಳಗಿಪ್ಪನಯ್ಯ ! 13

ಮಾಡುವುದು ಅನಾಚಾರ, ಮಾತಾಡುವುದು ಸದ್ವಿಚಾರ ! ಮಾಡುವುದಕ್ಕೂ ಮಾತಾಡುವುದಕ್ಕೂ ತಾಳಮೇಳವಿಲ್ಲದ ಮೇಲೆ, ಅಂತಶ್ಶುದ್ಧಿ ಎಲ್ಲಿಯದು ? ನುಡಿ ಯುವ ಚಟವಿದ್ದಂತೆ, ನಡೆಯುವ ಹಠವಿದ್ದರೆ—ಆಗ ದೇವರು ನಮ್ಮ ಮೈದುಂಬಿ ಕೊಳ್ಳುವನು.

[1] × (ಲಿ)
[2] ಹದುಳಿಗರಾದವರಲ್ಲಿಪ್ಪ (ಚ) (ಲಿ) (ಪಳ)

ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ !
ಅಂಬುಜಕ್ಕೆ ಭಾನುವಿನ ಉದಯದ ಚಿಂತೆ !
ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ !
[1]ನಮಗೆ[1] ನಮ್ಮ ಕೂಡಲಸಂಗಮದೇವರ
ನೆನೆವುದೇ ಚಿಂತೆ !

14

ಚಂದ್ರಿಕಾರಸಪರಿಪ್ಲುತವಾದಲ್ಲದ ಶೂನ್ಯಾನಂತದಲ್ಲಿ—ಚಕೋರಪಕ್ಷಿ ತನ್ನ ಗರಿಗೆದರಿ ಎತ್ತರಕ್ಕೆ ಏರಿ, ಆದಿ-ಅಂತಗಳನ್ನು ತುಳುಕಿಸಿ ಪುಳುಕಿಸಿ ಹಾರಾಡಲಾರದು. ಆದುದರಿಂದಲೇ ಅದಕ್ಕೆ ಬೆಳದಿಂಗಳಿನ ಚಿಂತೆ! ತರುಣಸೂರ್ಯಾರುಣಕಿರಣ ಕರತಲ ಕರುಣಸ್ಪರ್ಶವಾದಲ್ಲದೆ, ತಾವರೆ ದಳ ದಳ ಅರಳಿ, ರಸತುಂಬಿ, ತುಂಬಿಕೂಟದಲ್ಲಿ ತನ್ಮಯವಾಗಿರಲಾರದು. ಆದುದರಿಂದಲೇ ಅದಕ್ಕೆ ಸೂರ್ಯೋದಯದ ಚಿಂತೆ! ತನ್ನ ನಾಲ್ಕೂ ರೆಕ್ಕೆ ಬಿಚ್ಚಿ ಸುತ್ತೆಲ್ಲ ಬಯಲಲ್ಲಿ ನಿರಂತರ ಝೇಂಕಾರ ತಾರಸ್ವರದಲ್ಲಿ ಮೊರೆದು ಮೊರೆಯಿಟ್ಟು ಭ್ರಮಿಸಿ ಬಳಲಿದ ಭ್ರಮರವು—ಬದ್ಧಪುಷ್ಪಾಂಜಲಿ ಬಿರಿದು ತೊರೆದ ಜೇನ್‌ಗಂಗೆಯಲ್ಲಿ ಮೋರೆಯೂರಿ ಎದೆಯಾರ ಈಂಟದಲ್ಲದೆ ಸಂಭ್ರಮಿಸದು. ಆದುದರಿಂದಲೇ ಅದಕ್ಕೆ ಜೇನ ಚಿಂತೆ! ಭಕ್ತನಿಗಾದರೋ ಆತ್ಮಾನಂದದಲ್ಲಿ ವಿಹರಿಸಿ, ತನ್ನ ಹೃದಯಸಹಸ್ರಾರವನ್ನು ಅರಳಿಸಿ, ಭವರೋಗವನ್ನು ಪರಿಹರಿಸುವ ಅಮೃತವನ್ನು ಆಸ್ವಾದಿಸಲು ಅನುಮಾಡಿಕೊಡುವ ಶಿವಧ್ಯಾನದ ಕಡೆಗಲ್ಲದೆ, ಅವನ ಮನ ಓಲದು ಒಲಿಯದು ಮಿಕ್ಕೆಡೆಗೆ!

---

[1] (ಚ) ಎನಗೆ (ಅನ್ಯತ್ರ)

ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯ !
ಚಂದ್ರ ಕುಂದೆ ಕುಂದುವುದಯ್ಯ !
ಚಂದ್ರಂಗೆ ರಾಹುವಡ್ಡ ಬಂದಲ್ಲಿ ಅಂಬುಧಿ ಬೊಬ್ಬಿಟ್ಟಿತ್ತೆ ?
ಅಂಬುಧಿಯ ಮುನಿಯಾಪೋಷಶನವ ಕೊಂಬಲ್ಲಿ
ಚಂದ್ರಮನಡ್ಡ ಬಂದನೆ ?
ಆರಿಗಾರೂ ಇಲ್ಲ, ಕೆಟ್ಟವಂಗೆ ಕೆಳೆಯಿಲ್ಲ !
ಜಗದ ನಂಟ ನೀನೇ, ಅಯ್ಯ ಕೂಡಲಸಂಗಮದೇವ ! 15

ಚಂದ್ರೋದಯವಾದರೆ ಕಡಲುಬ್ಬಿ ಉಕ್ಕೇರುವುದು. ಚಂದ್ರಾಸ್ತವಾದರೆ ಕಡಲು ಕುಂದಿ ಕುಸಿಯುವುದು ! ಚಂದ್ರನಿಗೂ, ಕಡಲಿಗೂ ಪರಸ್ಪರ ಸ್ನೇಹವೇನೋ ಇದೆ. ಆದರೆ ಒಬ್ಬರ ಕಷ್ಟವನ್ನು ಪರಿಹರಿಸುವ ಸಾಮರ್ಥ್ಯವಿನ್ನೊಬ್ಬರಿಗಿಲ್ಲ. ಅಖಿಲರ ಕಷ್ಟಗಳನ್ನೂ ಪರಿಹರಿಸಬಲ್ಲ ನಿಖಿಲ ಸಾಮರ್ಥ್ಯ ಶಿವನಿಗಲ್ಲದೆ ಮಿಕ್ಕವರಿಗಿಲ್ಲ. ಬಂಧು ಬಳಗ, ಗೆಳೆಯರ ತಂಡ, ಪರಿಜನವೃಂದ—ಇದೆಯೆಂದು ದೇವರನ್ನು ಮರೆಯಬೇಡ. ಎಲ್ಲರ ಕಷ್ಟಗಳನ್ನೂ ಅರಿತು, ಸಮಯವರಿತು ಸಹಾಯಮಾಡಬಲ್ಲವನೆಂದರೆ ಆ ದೇವರೊಬ್ಬನೇ. ಅವನೇ ಜಗದ ನಂಟ ! ಇಂದಿನ ಗೆಳೆಯರು ನಾಳೆ ಕೈಬಿಡಬಹುದು. ಆದರೆ, ಎಂದೆಂದಿಗೂ ಕೈಹಿಡಿದು ನಡೆಸುವನೆಂದರೆ ಆ ದೇವರೊಬ್ಬನೇ !

ಬಡಪಶು ಪಂಕದಲ್ಲಿ ಬಿದ್ದರೆ
ಕಾಲ ಬಡಿವುದಲ್ಲದೆ ಬೇರೆ ಗತಿಯುಂಟೆ ?
ಶಿವ ಶಿವಾ ಹೋದಹೆ ಹೋದಹೆನಯ್ಯ !
ನಿಮ್ಮ ಮನದತ್ತಲೆನ್ನ ತೆಗೆಯಯ್ಯ !
ಪಶುವಾನು ಪಶುಪತಿ ನೀನು !
ತುಡುಗುಣಿಯೆಂದೆನ್ನ ಹಿಡಿದು ಬಡಿಯದ ಮುನ್ನ
ಒಡೆಯ, ನಿಮ್ಮ ಬೈಯದಂತೆ ಮಾಡು
ಕೂಡಲ ಸಂಗಮದೇವ. 16

ಬಡ ಗೋವೊಂದು ವಿವೇಚನೆಯಿಲ್ಲದೆ ಅನ್ಯರ ಹೊಲದಲ್ಲಿ ಮೇಯಲೆಂದು ಹೋಗಿ ಕೆಸರಲ್ಲಿ ಸಿಕ್ಕಿಬಿದ್ದರೆ ಕಾಲುಬಡಿಯುವುದಲ್ಲದೆ ಮತ್ತೇನು ತಾನೇ ಮಾಡೀತು! ಹಾಗೆಯೇ ನಾನು ನನ್ನ ಅಂತರಾತ್ಮಕ್ಕೆ ಅನ್ಯವಾದ ವಿಷಯಗಳತ್ತ ಮನ ಹರಿಸಿ, ಈ ಸಂಸಾರ ಪಂಕದಲ್ಲಿ ಕಾಲಿಕ್ಕಿ ಒಳಕ್ಕೆ ಹೂತುಹೋಗುತ್ತಿದ್ದೇನೆ, ಎಲೆ ದೇವರೇ, ನನ್ನನ್ನು ನಿನ್ನತ್ತ ಲೆಳೆದುಕೋ ! ನಾನು ಗೋವು ನೀನು ಗೋಪಾಲ, ನಾನು ಏನೂ ಅರಿಯದ ಪಶು, ನೀನು ಪಶುಪತಿ : ಚಾಪಲ್ಯಕ್ಕೆ ಬಲಿಬಿದ್ದು ಅಡ್ಡಹಾದಿ ಹಿಡಿದೆ ; ರಕ್ಷಿಸುವ ಭಾರ ನಿನ್ನದು. ಲೋಕವು ನನ್ನನ್ನು ತುಡುಗು ಮೇಯುವ ದನವೆಂದು ಬಡಿದು, ನನ್ನ ರಕ್ಷಕನಾದ ನಿನ್ನನ್ನು ಬೈಯುವುದಕ್ಕೆ ಮೊದಲೇ ನನ್ನನ್ನು ಉದ್ಧರಿಸು, ಜನರು ನನ್ನನ್ನು ಬಡಿಯುವರೆಂಬುದಕ್ಕಿಂತ, ನನ್ನ ಕಾರಣವಾಗಿ ನಿನ್ನನ್ನು ಅವರು ಬೈಯುವರೆಂಬುದೇ ನನ್ನನ್ನು ಹೆಚ್ಚು ನೋಯಿಸುತ್ತಿರುವುದು. ಇನ್ನೊಮ್ಮೆ ನಿನ್ನ ಹೊಲ ಮೇರೆಯನ್ನು ಬಿಟ್ಟು ಅಲುಗುವುದಿಲ್ಲ. ಇಂದೊಮ್ಮೆಗೆ ಸೈರಿಸಿ ಸಂರಕ್ಷಿಸು—ಎಂದು ಬಸವಣ್ಣನವರು ಸಂಸಾರದ ವಿಷಯವಿಹ್ವಲ ವಿಷಮ ಪರಿಸ್ಥಿತಿಯಲ್ಲಿ ನೊಂದು ದೇವರಿಗೆ ಮೊರೆಯಿಟ್ಟಿರುವರು.

ಎನ್ನ ಕಾಯುವ ದಂಡಿಗೆಯು ಮಾಡಯ್ಯ !
ಎನ್ನ ಶಿರವ ಸೋರೆಯು ಮಾಡಯ್ಯ !
ಎನ್ನ ನರವ ತಂತಿಯು ಮಾಡಯ್ಯ !
ಎನ್ನ ಬೆರಲ ಕಡ್ಡಿಯ ಮಾಡಯ್ಯ !
ಬತ್ತೀಸ ರಾಗವ ಹಾಡಯ್ಯ !
ಉರದಲೊತ್ತಿ [1]ಬಾಜಿಸು[1] ಕೂಡಲಸಂಗಮದೇವ. 17

ಈ ನಶ್ವರವಾದ ದೇಹ ಈಶ್ವರಸೇವೆಗೆ ಸಂದಲ್ಲದೆ ಸಾರ್ಥಕವಾಗದು. ವ್ಯರ್ಥವಾಗಿ ಹೋಗುವ ಈ ದೇಹವು ದೇವವಾಣಿಗೆ ಶ್ರುತಿ ಗೂಡಿಸುವ ಸಾಧನವಾಗಬೇಕು: ಈ ನಿಲುವಿನಲ್ಲಿ ನಿಂತು ಬಸವಣ್ಣನವರು ದೇವರನ್ನು ಪ್ರಾರ್ಥಿಸುತ್ತಿದ್ದಾರೆ. ಮಾನವ ಹಿತಕ್ಕಾಗಿ ಏನೆಲ್ಲ ಬೇಕಾಗಿದೆಯೋ ಅದು ತನ್ನಿಂದಾಗಲಿ, ಅದನ್ನು ದೇವರು ಆಗಿಸಲಿ— ಎನ್ನುವ ಅರ್ಥದಲ್ಲಿ ಶಿವನು ವೈಣಿಕನಾದರೆ, ತಾನು ಅವನ ಕೈಯ ವೀಣೆಯಾಗಲು ಅವರು ಹಂಬಲಿಸಿರುವರು.

ಸಮುದ್ರ [2]ಘನವೆಂದೆಂಬೆನೆ ?[2]
ಧರೆಯ ಮೇಲಡಗಿತ್ತು !
[3]ಆ[3] ಧರೆ [2]ಘನವೆಂದೆಂಬೆನೆ ?[2]
ನಾಗೇಂದ್ರನ ಫಣಾಮಣಿಯ ಮೇಲಡಗಿತ್ತು !
[3]ಆ[3] ನಾಗೇಂದ್ರ [2]ಘನವೆಂದೆಂಬೆನೆ ?[2]
[4]ಪಾರ್ವತಿಯ[4] ಕಿರುಕುಣಿಕೆಯ ಮುದ್ರಿಕೆಯಾದ !
[5]ಅಂಥಾ[5] ಪಾರ್ವತಿ [2]ಘನವೆಂದೆಂಬೆನೆ ?[2]
ಪರಮೇಶ್ವರನ ಅರ್ಧಾಂಗಿಯಾದಳು !
[5]ಅಂಥಾ[5] ಪರಮೇಶ್ವರ [2]ಘನವೆಂದೆಂಬೆನೆ ?[2]
ಕೂಡಲ ಸಂಗನ ಶರಣರ
ಮನದ ಕೊನೆಯ ಮೊನೆಯ ಮೇಲಡಗಿದನು ! 18

33 ನೇ ವಚನದ ತಾತ್ಪರ್ಯವೇ ಇದಕ್ಕೂ ಅನ್ವಯವಾಗುವುದು.

---

[1] (ಚ) ಬಾರಿಸು (ಅನ್ಯತ್ರ)
[2] (ಏ) ಘನವೆಂಬೆನೆ (ಅನ್ಯತ್ರ)
[3] (ಏ) × (ಅನ್ಯತ್ರ)
[4] ದೇವಿಯರ (ಏ)
[5] (ಚ) (ಹ) ಆ (ಏ) ಅಂತಹ (ಸ)

ಒಲವಿಲ್ಲದ ಪೂಜೆ, ನೇಹವಿಲ್ಲದ ಮಾಟ!
ಆ ಪೂಜೆಯೂ ಆ ಮಾಟವೂ
ಚಿತ್ರದ ರೂಹು ಕಾಣಿರಣ್ಣ!
ಚಿತ್ರದ ಕಬ್ಬು ಕಾಣಿರಣ್ಣ!
ಅಪ್ಪಿದರೆ ಸುಖವಿಲ್ಲ!
ಮೆಲಿದರೆ ರುಚಿಯಿಲ್ಲ!
ಕೂಡಲಸಂಗಮದೇವ
ನಿಜವಿಲ್ಲದವನ ಭಕ್ತಿ 'ಯಿಂತುಟು'[1]! 19

ಪೂಜೆ ಒಲುಮೆಯಿಂದ ನಡೆಯಬೇಕು; ಆಚರಣೆ ಸ್ನೇಹದಿಂದ ನಡೆಯಬೇಕು. ನಡೆವ ಪೂಜೆಯಲ್ಲಿ ಒಲುಮೆಯಿದೆಯೆನ್ನುವುದಕ್ಕೆ ಸಾಕ್ಷಿಯೇನು? ಭಾವ-ದೃಷ್ಟಿ ನಟ್ಟು; ಅನುಭಾವಪಾಲಿಂಗನದಲ್ಲಿ ಆತ್ಮರತಿ ಹುಟ್ಟಿ, ತನು ಪುಲಕಪ್ರಫುಲ್ಲವಾಗಿ, ಆನಂದಾಶ್ರು ಮಕರಂದ ದಳದಳ ಹನಿದು, ನಾವು ಚಿನ್ಮಯ ತನ್ಮಯವಾಗಬೇಕು! ಮಾಡುವ ಆಚರಣೆಯಲ್ಲಿ ಸ್ನೇಹವಿದೆಯೆನ್ನುವುದಕ್ಕೇನು ಸಾಕ್ಷಿ? ಪ್ರತಿಫಲದ ಅಂಟು ಕೈಗಂಟದೆ, ಕರ್ಮಫಲವನ್ನೆಲ್ಲ ತೊಳೆ ತೊಳೆ ಬಿಡಿಸಿ, ನಿರಂಜನವಾಗಿ—ಆದರೂ ಸ್ನಿಗ್ಧತೆಯಿಂದ ಜಂಗಮಲಿಂಗ-ದಾಸೋಹ ಮಾಡಬೇಕು. ಆಧ್ಯಾತ್ಮಿಕಸ್ವಾರ್ಥ-ಲೌಕಿಕ ಪುರುಷಾರ್ಥಗಳೆಲ್ಲದರ ಪರಮಾರ್ಥ ಇಷ್ಟೇ! ಅಂದರೆ ಅದು ಅಷ್ಟು ಸುಲಭವೆಂದೇನೂ ಅಲ್ಲ! ಮಹತ್ತಾದುದು ಸುಲಭಸಾಧ್ಯವಲ್ಲವೆನಿಸಿದೊಡನೆಯೇ ಅದನ್ನು ಬಿಟ್ಟು ಕೊಡುವುದು ದುಷ್ಟರದೊಂದು ಶಿಷ್ಟಪದ್ಧತಿಯಾದರೆ, ಅದನ್ನು ಸಾಧಿಸುವೆನೆಂಬಂತೆ ಬಣ್ಣ ಕಟ್ಟಿಕೊಳ್ಳುವುದು (ನಾಗರಿಕ) ಶಿಷ್ಟರದೊಂದು ದುಷ್ಟ ಪದ್ಧತಿ! ಈ ಶಿಷ್ಟಂಮನ್ಯರ ಸೋಂಕು ಸಾಂಕ್ರಾಮಿಕವಾಗಿ, ಆಚರಣೆಗಿಂತ ಅನುಕರಣೆಯೇ ಲಾಭದಾಯಕವೆನಿಸಿ, ಸಹಜವಾದ ಆಚರಣೆ ಅನವಶ್ಯಕವೆನಿಸುವ ಕಪಟಿಗಳ ದೊಂಬಿ ಸಮಾಜದಲ್ಲಿ ವಿಷದಂತೆ ಉಕ್ಕೇರುವ ವಿಷಮ ಪರಿಸ್ಥಿತಿಯನ್ನು ಬಸವಣ್ಣನವರು ಮನಗಂಡು ಸಾಧಕ-ಸಾಮಾನ್ಯರಿಗೆ ಈ ವಚನದ ಮೂಲಕ ಎಚ್ಚರಿಕೆನೀಡುತ್ತಿರುವರು.

ಕಪಟಿಗಳ ಡಾಂಭಿಕ ಪೂಜೆ—ಆಚರಣೆಗಳ ಕೃತ್ರಿಮತೆಯನ್ನು ನಿಮ್ನೋನ್ನತಗಳ ಭ್ರಮೆ ಹಿಡಿಸುವಂತೆ ಬರೆದ ಹೆಣ್ಣಿನ ಚಿತ್ರಕ್ಕೂ, ಬಣ್ಣ ಬಣ್ಣವಾಗಿ, ಗೆಣ್ಣುಗೆಣ್ಣಾಗಿ ಬಿಡಿಸಿ ಬರೆದ ಕಬ್ಬಿನ ಚಿತ್ರಕ್ಕೂ ಹೋಲಿಸಿ—ಆ ಚಿತ್ರದ ಹೆಣ್ಣನ್ನು ಅಪ್ಪಿದರೆ ರತಿಸುಖವಿಲ್ಲದಂತೆ ಡಾಂಭಿಕ ಪೂಜೆಯಲ್ಲಿ ತನ್ಮಯತೆಯಿಲ್ಲವೆಂದೂ, ಚಿತ್ರದ ಕಬ್ಬನ್ನು ಚಪ್ಪರಿಸಿದರೆ ಸವಿರುಚಿ ಯಿಲ್ಲದಂತೆ ಡಾಂಭಿಕಾಚರಣೆಯಲ್ಲಿ ಹುರುಳಿಲ್ಲವೆಂದೂ, ಅವು ತೋರಿಕೆಗೆ ಮಾತ್ರ ಅದ್ಭುತವೆನಿದರೂ ಅವುಗಳಿಂದ ಯಾರಿಗೂ ಏನೂ ಪ್ರಯೋಜನವಿಲ್ಲವೆಂದೂ ನಿದರ್ಶಿಸಿರುವರು.

---

[1] (ಜ) ಯಂತುಟು (ಕ) × (ಅನ್ಯತ್ರ)

[1]ಎನ್ನ[1] ವಚನದದಲ್ಲಿ [2]ನಿಮ್ಮ[2] ನಾಮಾಮೃತ ತುಂಬಿ !
[1]ಎನ್ನ[1] ನಯನದಲ್ಲಿ [2]ನಿಮ್ಮ[2] ಮೂರುತಿ ತುಂಬಿ !
[1]ಎನ್ನ[1] ಮನದಲ್ಲಿ [2]ನಿಮ್ಮ[2] ನೆನಹು ತುಂಬಿ !
[1]ಎನ್ನ[1] ಕಿವಿಯಲ್ಲಿ [2]ನಿಮ್ಮ[2] ಕೀರುತಿ ತುಂಬಿ !
ಕೂಡಲಸಂಗಮದೇವ,
ನಿಮ್ಮ ಚರಣ ಕಮಲ[3]ದೊಳಗಾನು[3] ತುಂಬಿ ! 20

ನನ್ನ ಪ್ರತಿಯೊಂದು ವಚನಪುಷ್ಪದಲ್ಲಿ "ಕೂಡಲಸಂಗಮದೇವ" ಎಂಬ ನಿಮ್ಮ ನಾಮಾಮೃತಾಂಕಿತವು ತುಂಬಿ, ನನ್ನ ನಯನ ಕಮಲದಲ್ಲಿ ನಿಮ್ಮ ಕಮನೀಯ ಮೂರ್ತಿಯೇ ತುಂಬಿ, ನನ್ನ ಮನೋಸಹಸ್ರಾರಮಧ್ಯದಲ್ಲಿ ನಿಮ್ಮ ಧ್ಯಾನವು ತುಂಬಿ, ನನ್ನ ಕರ್ಣಕರ್ಣಿಕಾರದಲ್ಲಿ ನಿಮ್ಮಯಶೋಗೀತಿಯೇ ತುಂಬಿ, ಇನ್ನು ನಿಮ್ಮ ಪಾದಕಮಲದಲ್ಲಿ ನಾನು ತುಂಬಿ.

ಅಥವಾ

ನನ್ನ ಮಾತಿನಲ್ಲಿ ನಿಮ್ಮ ನಾಮಾಮೃತ ತುಂಬಿ (ಹೋಗಿದೆ). ನನ್ನ ಕಣ್ತುಂಬ ನಿಮ್ಮ ರೂಪ ತುಂಬಿ (ಹೋಗಿದೆ). ನನ್ನ ಮನದಲ್ಲಿ ನಿಮ್ಮ ಧ್ಯಾನ ತುಂಬಿ (ಹೋಗಿದೆ). ನನ್ನ ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿ (ಹೋಗಿದೆ). ಆದುದರಿಂದ, ನಿಮ್ಮ ಪಾದಕಮಲದಲ್ಲಿ ನಾನು ತುಂಬಿ ತನ್ಮಯನಾಗಿದ್ದೇನೆ.

ನನ್ನ ಸರ್ವಾಂಗದಲ್ಲಿ ನೀನು ತುಂಬಿರುವಂತೆ, ನಿನ್ನಲ್ಲಿ ನಾನು ತುಂಬಿಕೊಂಡಿರುವೆನು. ನಮ್ಮಿರ್ವರ ಸಂಬಂಧ ಪರಸ್ಪರ ಸಂವೃತ್ತವಾದದು. ನನ್ನ ನಿನ್ನ ಸಂಬಂಧ ಬಿಡಿಸಲಾರದ ಅನ್ಯೋನ್ಯಬಂಧ.

[1] (ಶೂ) (ಚ) × (ಅನ್ಯತ್ರ)
[2] (ಕ) (ಶೂ) (ಚ)
[3] (ಚ) (ಹ) (ಕ) (ಹಸು) (ನಿ) (ಶೂ) ದಲಾನು (ಸ)

ನೆಚ್ಚಿದೆನೆಂದರೆ, ಮೆಚ್ಚಿದೆನೆಂದರೆ
ಸಲೆ ಮಾರುವೋದೆನೆಂದರೆ
ತನುವನಲ್ಲಾಡಿಸುವೆ 'ನೀನು'
ಮನವನಲ್ಲಾಡಿಸುವೆ 'ನೀನು !'
ಧನವನಲ್ಲಾಡಿಸುವೇ 'ನೀನು !'
ಇವೆಲ್ಲಕಂಜದಿದ್ದರೆ
[1]ಭಕ್ತಿ [2]ಕಂಪಿತ ನಮ್ಮ ಕೂಡಲಸಂಗಮದೇವ. 21

ದೇವರನ್ನು ನೆಚ್ಚಿದೆ ಮೆಚ್ಚಿದೆನೆಂದರೆ, ಅವನಿಗೆ ತನ್ನ ಜೀವಿತಸರ್ವಸ್ವವನ್ನೂ ಮಾರುಗೊಟ್ಟು ದಾಸನಾದೆನೆಂದರೆ—ಆ ಬರಿಯ ಮಾತಿನಿಂದಲೇ ದೇವರು ಭಕ್ತನಿಗೆ ಒಲಿಯುವನಲ್ಲ. ತನು–ಮನ-ಧನಗಳನ್ನು ಗುರು–ಲಿಂಗ–ಜಂಗಮಕ್ಕೆ ಅರ್ಪಿಸುವ ದಾಸೋಹ–ಭಾವ ಆ ಭಕ್ತನಲ್ಲಿ ಬೇರು ಬಿಟ್ಟಿರುವುದೋ ಇಲ್ಲವೋ ಎಂದು, ದೇವರು ಭಕ್ತನನ್ನು ಅಲುಗಿಸಿ ಆಘಾತಿಸಿ ಪರೀಕ್ಷಿಸುವನು. ಧೃಢವಾಗಿ ನಿಂತು ಉಗ್ರಪರೀಕ್ಷೆಗಳಲ್ಲಿ ತೇರ್ಗಡೆಯಾದಾಗ ಮಾತ್ರ ಆ ಭಕ್ತಶ್ರೇಷ್ಠನಿಗೆ ದೇವರು ತಾನೇ ದಾಸನಾಗುವನು.

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ !
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ !
ಇಲ್ಲಿ ಸಲ್ಲದವರಲ್ಲಿಯೂ ಸಲ್ಲರಯ್ಯ !
ಕೂಡಲಸಂಗಮದೇವಯ್ಯ ! 22

ದೇವಲೋಕದವರಾದರೂ ಮುಕ್ತಿ ಪಡೆಯ ಬೇಕಾದರೆ ಮರ್ತ್ಯಜನ್ಮದಲ್ಲಿ ಮಾನವೋತ್ತಮರಾಗಿ ತೇರ್ಗಡೆಯಾಗಬೇಕು. ಇಹವು ಪರಕ್ಕೆ ಒಡ್ಡಿದ ಒರೆಗಲ್ಲು. ಟಂಕ ಸಾಲೆಯಲ್ಲಿ ಠಣ್ಣೆಂದ ನಾಣ್ಯ ಅಲ್ಲಿ ಇಲ್ಲಿ ಎಲ್ಲೆಲ್ಲೂ ನಡೆಯುವಂತೆ, ಜೀವರು ಪರಮರಾಗಿ ರೂಪಗೊಳ್ಳುವ ಈ ಮರ್ತ್ಯದಲ್ಲಿ ಸೈ ಎನಿಸಿಕೊಂಡವರಿಗೆ ಪರಲೋಕದಲ್ಲೂ ಪುರಸ್ಕಾರವುಂಟು. ಇಲ್ಲದವರಿಗೆ ಇಹಪರವೆರಡೂ ಇಲ್ಲ.

---

[1] + (ಜ)
[2] ಭಕ್ತ (ನ)

ಅರ್ಥರೇಖೆಯಿದ್ದಲ್ಲಿ ಫಲವೇನು ?
ಆಯುಷ್ಯರೇಖೆಯಿಲ್ಲ 'ದನ್ನಕ್ಕ !'
ಹಂದೆಯ ಕೈಯಲ್ಲಿ ಚಂದ್ರಾಯುಧವಿದ್ದು ಫಲವೇನು
ಅಂಧಕನ ಕೈಯಲ್ಲಿ ದರ್ಪಣವಿದ್ದು ಫಲವೇನು ?
ಮರ್ಕಟನ ಕೈಯಲ್ಲಿ ಮಾಣಿಕ್ಯವಿದ್ದು ಫಲವೇನು ?
ನಮ್ಮ ಕೂಡಲಸಂಗನ ಶರಣರನರಿಯದವರ ಕೈಯಲ್ಲಿ
ಲಿಂಗವಿದ್ದು ಫಲವೇನು—ಶಿವಪಥವನರಿಯಃದನ್ನಕ್ಕ ?[2] 23

ನಮ್ಮ ಅಂಗೈಯಲ್ಲಿ ಧನರೇಖೆ ಎಷ್ಟು ನಿಡಿದಾಗಿದ್ದರೇನು ಬಂತು, ಆ ಐಶ್ವರ್ಯವನ್ನು ಅನುಭವಿಸುವ ಆಯುಷ್ಯ ರೇಖೆಯಿಲ್ಲದವೇಲೆ ! ಹೇಡಿಯ ಕೈಯಲ್ಲಿ ಎಂತಹ ಝುಗ ಝುಗಿಸುವ ಖಡ್ಗವಿದ್ದರೇನು, ಬಂತು, ಅದನ್ನು ಬಳಸುವ ಶಕ್ತಿಸಾಮರ್ಥ್ಯ ಅವನ ಕೈಯಲ್ಲಿಲ್ಲದ ಮೇಲೆ? ಕುರುಡನ ಕೈಯಲ್ಲಿ ಕನ್ನಡಿಯಿದ್ದೇನು ಬಂತು, ಅವನಲ್ಲಿ ತನ್ನ ಪ್ರತಿಬಿಂಬವನ್ನು ಕಾಣುವ ಕಣ್ಣಿಲ್ಲದ ಮೇಲೆ ! ಕೋತಿಯ ಕೈಯಲ್ಲಿ ಅನರ್ಘ್ಯವಾದ ರತ್ನವಿದ್ದರೇನು ಬಂತು, ಅದನ್ನು ಕಣ್ತುಂಬ ನೋಡಿ ಅದರ ಅನರ್ಘ್ಯತೆಯನ್ನು ಮನಗಾಣುವ ನಿಶ್ಚಂಚಲ ಸಾವಧಾನ ಮನಸ್ಸು ಅದಕ್ಕಿಲ್ಲದ ಮೇಲೆ? ಹಾಗೆಯೇ ಲಿಂಗವಂತನು ಶಿವನನ್ನೂ ಶಿವಶರಣರನ್ನೂ ಶಿವಪಥವನ್ನೂ ಧ್ಯಾನಿಸಿ, ಸತ್ಕರಿಸಿ, ಆಚರಿಸಬೇಕು. ಇಲ್ಲದಿದ್ದರೆ ಅವನು ಕೈಯಲ್ಲಿ ಹಿಡಿದ ಲಿಂಗವು ಕೋತಿಯು ಕೈಯ ಮಾಣಿಕ್ಯದಂತೆ ಕಲ್ಲಿಗಿಂತ ಕಡೆಯೆನಿಸುವುದು. ಕೈಯಲ್ಲಿ ಲಿಂಗ ಹಿಡಿದವನು ಹಸನಾದ ಬಾಳನ್ನು ನಡೆಸಬೇಕು. ಜಗತ್ಕಲ್ಯಾಣಕ್ಕೆ ವಿರುದ್ಧವಾದುದನ್ನು ಛೇದಿಸಬೇಕು. ವಿಶ್ವವ್ಯಾಪಿಯಾದ ಸ್ವಸ್ವರೂಪವನ್ನು ಮನಗಾಣಬೇಕು.

---

[1] ದನ್ನಕರ (ನಿ) (ಕ)
[2] ದನ್ನಕ್ಕರ (ಚ) ದನ್ನಕ್ಕ (ನಿ)

ನರೆ ಕೆನ್ನೆಗೆ, ತೆರೆ ಗಲ್ಲಕೆ
ಶರೀರ ಗೂಡುವೋಗದ ಮುನ್ನ
ಹಲ್ಲು ಹೋಗಿ, ಬೆನ್ನು ಬಾಗಿ
ಅನ್ಯರಿಗೆ ಹಂಗಾಗದ ಮುನ್ನ
ಕಾಲ ಮೇಲೆ ಕೈಯನೂರಿ
ಕೋಲ ಹಿಡಿಯದ ಮುನ್ನ
ಮುಪ್ಪಿಂದೊಪ್ಪವಳಿಯದ ಮುನ್ನ
ಮೃತ್ಯು ಮುಟ್ಟದ ಮುನ್ನ
'ಪೂಜಿಸುವೋ' ಕೂಡಲಸಂಗಮದೇವನ ! 24

ಕೆನ್ನೆಯಲ್ಲಿ ನರೆಗೂದಲು ಕಾಣಿಸಿತು, ಗದ್ದವೆಲ್ಲ ಸುಕ್ಕು ಬಿದ್ದಿತು, ಶರೀರ ಬಿಗಿದಪ್ಪಿ ಗೂಡರಿಸಿತು, ಹಲ್ಲು ಹೋಯಿತು, ಬೆನ್ನು ಬಾಗಿತು, ಕಾಲ ಮೇಲೆ ಕೈಯೂರಿಯಾಯಿತು, ಕೈಯಲ್ಲಿ ಊರೆಗೋಲು ಹಿಡಿದಾಯಿತು—ಹೀಗೆ ಮುಪ್ಪಿನಿಂದ ಕ್ರಮ ಕ್ರಮವಾಗಿ ದೇಹ ಜರ್ಜರಿತವಾಯಿತು—ಇನ್ನೇನು ಸಾವು ಬರುವ ವೇಳೆಯಾಯಿತು. ಆ ಸಾವಿನ ದಾಡೆಗೆ ನೀನು ಈಡಾಗುವುದಕ್ಕೆ ಮೊದಲೇ ದೇವರನ್ನು ಪೂಜಿಸು. ವಿವೇಕಿಯಾದವನು ಮುಪ್ಪಡಸಿ ಅನ್ಯರಿಗೆ ಹಂಗಾಗುವುದಕ್ಕೆ ಮೊದಲೇ, ಮೃತ್ಯು ನುಂಗುವುದಕ್ಕೆ ಮೊದಲೇ, ದೇವಕಾರ್ಯಕ್ಕೆ ತನ್ನ ಜೀವನವನ್ನು ಮುಡಿಪಾಗಿಡುವನು.

---

(ಚ) ಪೂಜಿಸು ನಮ್ಮ (ಸ) ಪೂಜಿಸು (ಹ) (ಕ) (ಹಸ) (ನಿ).

ಅಂದು, ಇಂದು, ಮತ್ತೊಂದೆನಬೇಡ!
ದಿನ[1]ವಿಂದೇ[1]ಶಿವ ಶರಣೆಂಬವಂಗೆ!
ದಿನ[1]ವಿಂದೇ[1] ಹರ ಶರಣೆಂಬವಂಗೆ!
ದಿನ[1]ವಿಂದೇ[1]ನಮ್ಮ ಕೂಡಲಸಂಗನ
ಮಾಣದೆ ನೆನೆವಂಗೆ! 25

ದೇವರನ್ನು ಭಜಿಸಿ ದಿವ್ಯಜೀವನವನ್ನು ಆರಂಭಿಸಲು ದಿನಘಳಿಗೆಯ ಗುಣಿತ ಗಣಿತಗಳೇಕೆ? ಇಂದು-ನಾಳೆ-ನಾಡಿದೆನ್ನಬೇಡ. ಮಕ್ಕಳಾಗಲಿ, ಅವರಿಗೆ ಮದುವೆಯಾಗಲಿ, ಮೊಮ್ಮಕ್ಕಳ ಮುದ್ದು ಮುಖ ನೋಡೋಣ ಎಂದು—ಆಧ್ಯಾತ್ಮಿಕ ಜೀವನಾರಂಭೋತ್ಸವವನ್ನು ಮುಂದೂಡುತ್ತ ಕಾಲವಂಚನೆ ಮಾಡುವುದೇಕೆ? ಸಂಸಾರವನ್ನು ಬಿಡುವುದರಿಂದ ವಿಯೋಗವಾದೀತೇ ಹೊರತು ಯೋಗ ಹೇಗಾದೀತು? ಸಂಸಾರವು ಯೋಗದ ನೆಲೆಗೇರಿಪರೆ ಆಗ ಆ "ಸಂ-ಸಾರ"ವೂ ಪೂರ್ಣಯೋಗವಾದೀತು! ದಿವ್ಯಜೀವನವು ಒಂದು ನಿರಂತರನಿತ್ಯ-ಉತ್ತಮ-ಧ್ಯಾನಕ್ರಿಯೆ! ಅದನ್ನಿಂದೇ ಈಗಲೇ ಆರಂಭಿಸು.

ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯ!
ರಾಶಿ-ಕೂಟ, ಋಣ-ಸಂಬಂಧ ಉಂಟೆಂದು ಹೇಳಿರಯ್ಯ!
ಚಂದ್ರಬಲ-ತಾರಾಬಲ ಉಂಟೆಂದು ಹೇಳಿರಯ್ಯ!
ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿರಯ್ಯ!
ಕೂಡಲಸಂಗಮದೇವರ ಪೂಜಿಸಿದ ಫಲ ನಿಮ್ಮದಯ್ಯ! 26

ಪೂಜೆ-ಪುಣ್ಯಕಾರ್ಯಗಳನ್ನು ಮಾಡುವ ಮನಸ್ಸಾದರೆ ಅದನ್ನು ಮಾಡಲು ಶುಭ ದಿನ ಯಾವುದು, ಅಮೃತ ಘಳಿಗೆ ಯಾವುದೆಂದು ಚಿಂತಿಸಿ, ದಿಕ್ಕುಗೆಟ್ಟು ಪುರೋಹಿತರ ಬಳಿಗೆ ಓಡಬೇಡ. ಪುಣ್ಯಕಾರ್ಯ ಮಾಡಬೇಕೆಂಬ ಬಯಕೆ ನಿನ್ನ ಮನಸ್ಸಿನಲ್ಲಿ ಮೊಳೆತ ಘಳಿಗೆಯೇ ಶುಭಘಳಿಗೆ! ಅದಕ್ಕೂ ನಿನಗೂ ಋಣ ಸಂಬಂಧವುಂಟು! ಅದನ್ನು ನಿರ್ವಹಿಸುವ ಚಂದ್ರಬಲ ತಾರಾಬಲ ಸರ್ವಬಲವೂ ನಿನ್ನಲ್ಲಿರುವುದು! ನಾಳೆಯೆನ್ನಬೇಡ, ತಡಮಾಡಬೇಡ. ನಾಳೆಗಿಂತ ಇಂದಿನ ದಿನವೇ ಎಂದೆಂದಿಗೂ ಲೇಸು. ಪವಿತ್ರವಾದುದನ್ನು ಮಾಡುವವನು ನೀನೇ, ಅದರ ಫಲ ನಿನ್ನದೇ—ಈ ಸಂಬಂಧವಾಗಿ ಇನ್ನೊಬ್ಬರನ್ನು ಕೇಳುವುದೇನಿದೇ? ಕಾಲಲಬ್ಧಿಗಾಗಿ ಕಾಯುವುದೇನಿದೆ?

---

1 ಬಂದೇ (ಹಳ)

ಆಡಿದರೇನೋ ? [1]ಹಾಡಿ[1]ದರೇನೋ ? ಓದಿದರೇನೋ ?
ತ್ರಿವಿಧ ದಾಸೋಹವಿಲ್ಲದನ್ನಕ್ಕ !
ಆಡದೇ ನವಿಲು ? ಹಾಡದೇ ತಂತಿ ? ಓದದೇ ಗಿಳಿ ?
ಭಕ್ತಿಯಿಲ್ಲದವರನೊಲ್ಲ ಕೂಡಲಸಂಗಮದೇವ ! 27

ಶಿವನ ಮತ್ತು ಶಿವಭಕ್ತರ ಕಥಾಪ್ರಸಂಗಗಳನ್ನು ಅಭಿನಯಿಸಿ ಕುಣಿದಾಡ ಬಹುದು. ಆದ್ಯರ ವಚನ–ಗೀತೆ–ಶಿವಗೀತೆ–ಹರನಾಮಸಂಕೀರ್ತನೆಗಳನ್ನು ಹಾಡ ಬಹುದು. ವೇದ–ಆಗಮ–ಉಪನಿಷತ್ತುಗಳನ್ನು ಓದಬಹುದು ! ಅಷ್ಟರಿಂದ ಅಂತರಾತ್ಮನ ಮೇಲೆ ಆದ ಸಂಸ್ಕಾರವೇನು ? ಗುರುಕಾರ್ಯಕ್ಕೆ ತನುವನ್ನು ತೇಯದೆ, ಸುಂದರಶಿವಚಿಂತನೆಗೆ ಮನವೀಯದೆ, ಜಂಗಮಜಗತ್ತಿಗೆ ಕಾಯಕದಿಂದಾರ್ಜಿಸಿದ ಧನಧಾನ್ಯವನ್ನು ವಿತರಣೆ ಮಾಡದೆ–ಏನು ಮಾಡಿದರೇನು ? ನವಿಲು ಕುಣಿಯುವು ದಿಲ್ಲವೆ ? ತಂತಿ ಹಾಡುವುದಿಲ್ಲವೆ ? ಗಿಳಿ ಓದುವುದಿಲ್ಲವೇ ? ಮನುಷ್ಯನು ಸಾಧಿಸ ಬೇಕಾದುದು ವೀಣೆ–ಪ್ರಾಣಿಗಳಿಗೆ ಸಾಧ್ಯವಾದಷ್ಟನ್ನು ಮಾತ್ರವೇ ಏನು ? ಅವು ಸಾಧಿಸಲಾರದ ಕಾಯಕಸಹಿತ ಭಕ್ತಿಯನ್ನು ಸಂಪಾದಿಸಿದಾಗ ಮಾತ್ರ ಮಾನವರಿಗೆ ಮಾನ ಬಂದೀತು. ಹಾಗಲ್ಲದೆ ಅವರನ್ನು ದೇವರು ಒಲ್ಲ.

---

[1] ಪಾಡಿ (ಚ)

ಎಲವೋ ಎಲವೋ ಪಾಪಕರ್ಮವ ಮಾಡಿದವನೇ,
ಎಲವೋ ಎಲವೋ 'ಬ್ರಹ್ಮಹತ್ಯವ' ಮಾಡಿದವನೇ
ಒಮ್ಮೆ ಶರಣೆನ್ನೆಲವೋ !
ಒಮ್ಮೆ ಶರಣೆಂದರೆ ಪಾಪಕರ್ಮ ಓಡುವುದು !
ಸರ್ವ ಪ್ರಾಯಶ್ಚಿತ್ತಕ್ಕೆ ಹೊನ್ನ ಪರ್ವತಗಳೆಯ್ದುವು
ಒರ್ವಂಗೆ ಶರಣೆನ್ನು ನಮ್ಮ ಕೂಡಲ ಸಂಗಮದೇವಂಗೆ ! 28

ನಾನು ಆ ಪಾಪಕಾರ್ಯ ಮಾಡಿದೆ, ಈ ಪಾಪಕಾರ್ಯ ಮಾಡಿದೆ, ಇನ್ನು ಮುಂದೆ ಪುಣ್ಯಕಾರ್ಯ ಮಾಡಿದರೂ—ಇದುವರೆಗೆ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಸಿಕೊಳ್ಳದೆ ನನಗೆ ಸದ್ಗತಿಯಿಲ್ಲವೆಂದು ನೀನು ಉದ್ವೇಗಪಡಬೇಡ. ನೀನು ಪಾಪ ಮಾಡಿರುವುದು ಈ ಜನ್ಮದಲ್ಲಿ ಮಾತ್ರವೇನು ? ಹಿಂದಿನ ಜನ್ಮದಲ್ಲಿ, ಅದಕ್ಕೆ ಹಿಂದಿನ ಜನ್ಮದಲ್ಲಿ ಮಾಡಿಲ್ಲವೇನು ? ಆ ಜನ್ಮಜನ್ಮಾಂತರಗಳಲ್ಲಿ ಮಾಡಿದ ಪಾಪಗಳನ್ನೆಲ್ಲ ಕಳೆದುಕೊಳ್ಳಲು ಯಾವ ಅಯ್ಯನವರಿಗೆ ಏನು ದಾನ ಮಾಡಲಿ, ಯಾರಿಂದ ಯಾವ ಯಜ್ಞಯಾಗ ಮಾಡಿಸಲಿ ಎಂದು ಶಾಸ್ತ್ರಿಗಳಲ್ಲಿ ವ್ಯವಹರಿಸತೊಡಗಿದರೆ, ಆ ವಿಧವಾದ ವೆಚ್ಚಕ್ಕೆ ನಿನ್ನಲ್ಲಿ ದುಡ್ಡು ಬೆಟ್ಟಗಳಿಷ್ಟಿದ್ದರೂ ಸಾಲದಾಗುವುದು. ಮೇಲಾಗಿ ನಿನ್ನ ಅಂತರಂಗದ ಶುದ್ಧಿಗಾಗಿ ಈ ಬಹಿರಾಚರಣೆಗಳಿಂದ ಪ್ರಯೋಜನವೇನು? ನೀನು ಹಿಂದೆ ಬ್ರಹ್ಮಹತ್ಯದಂತಹ ಘೋರಾತಿಘೋರ ಪಾಪವನ್ನೇ ಮಾಡಿರು, ಅದಕ್ಕೇಕೆ ಎದೆಗುಂದುವೆ, ಹಿಂದೆ ಮಾಡಿದ್ದು ತಪ್ಪಾಯಿತು, ಇನ್ನು ಮಾಡೆನೆಂದು ನಿಶ್ಚಯಿಸಿ, ಮಾಡದಂತಿರಿಸೆಂದು ದೇವರಿಗೆ ಶರಣು ಹೋಗು, ಸಾಕು. ಪಶ್ಚಾತ್ತಾಪದಿಂದ ಶಿವನ ಹೆಸರನ್ನೊಮ್ಮೆ ಉಚ್ಚರಿಸು, ಸಾಕು. ನೀನು ಸರ್ವಪಾಪಗಳಿಂದ ಬಿಡುಗಡೆ ಹೊಂದುವೆ.

---

[1] ಬ್ರಹ್ಮೇತಿಯ (ಕ) (ನ)

ಪುಣ್ಯ ಪಾಪವೆಂಬವು ತಮ್ಮಿಷ್ಟ ಕಂಡಿರೇ !
" ಅಯ್ಯ " ಎಂದೆಡೆ ಸ್ವರ್ಗ !
" ಎಲವೋ " ಎಂದಡೆ ನರಕ ! !
ದೇವ–ಭಕ್ತ–ಜಯ–ಜೀಯಾ ಎಂಬ ನುಡಿಯೊಳಗೆ
[1]ಕೈಲಾಸವೈದುವುದು' ಕೂಡಲಸಂಗಮದೇವ ! 29

ಪುಣ್ಯ ಪಾಪಗಳ ಬಗ್ಗೆ ಜನರು ಅದ್ಭುತ ಅತಿರೇಕ ಕಲ್ಪನೆಗಳನ್ನು ಇಟ್ಟು ಕೊಂಡಿರುವಂತೆ ಕಾಣುವುದು. ಪಾಪವನ್ನು ಗಳಿಸುವುದು ಮಾತ್ರ ಅತಿಸುಲಭ, ಪುಣ್ಯವನ್ನು ಗಳಿಸುವುದು ಕಡು ಕಷ್ಟ—ಎಂಬುದೇ ಅವರ ಸಾಮಾನ್ಯ ಗ್ರಹಿಕೆ. ಆದುದರಿಂದಲೇ ಪುಣ್ಯ ಕಾರ್ಯವೆಂದರೆ ನಮ್ಮಿಂದ ಸುಲಭಸಾಧ್ಯವಲ್ಲವೆಂದು ತಟಸ್ಥ ರಾಗುವರು ; ಅಥವಾ ಪಾಪದ ಕಡೆಗೇ ಓಲುವರು. ಇದು ಸರಿಯಲ್ಲ. ಪಾಪ ಪುಣ್ಯ ಗಳೆರಡರಲ್ಲಿ ಯಾವುದನ್ನು ಗಳಿಸುವುದೂ ಸುಲಭವೇ—ಆದರೆ ಗಳಿಸುವ ದಾರಿ ಮಾತ್ರ ಬೇರೆ ಬೇರೆಯಷ್ಟೇ! 'ಅಯ್ಯ' ಎಂದು ಪರಸ್ಪರ ಸಹಕಾರ–ಗೌರವ–ಭಾವ ಗಳಿಂದ ಜನರೊಡನೆ ವ್ಯವಹರಿಸಿದರೆ ಪುಣ್ಯ, ಅದರಿಂದ ಸ್ವರ್ಗ ! ಎಲವೋ ಎಂದು ಪ್ರತಿಷ್ಠೆ–ದುರಹಂಕಾರ ಮೊದಲಾದ ಸಮಾಜ ವಿರುದ್ಧ ರೀತಿಯಲ್ಲಿ ನಡೆದುಕೊಂಡರೆ ಪಾಪ, ಆದರಿಂದ ನರಕ ! ಪುಣ್ಯ–ಪಾಪಗಳೆಂಬವು, ಸ್ವರ್ಗ–ನರಕಗಳೆಂಬವು ನಮ್ಮ ಕೈಯಿ ಬಾಯಿಗಳಿಂದ ಮಾಡಿಕೊಳ್ಳುವ ನಮ್ಮ ಸ್ವಂತ ಸೃಷ್ಟಿಗಳು.

---

[1] (ಹಳ) ಕೈಲಾಸವೈದುವುದೆ [ದು ?] (ಕ) (ನಿ)
ಕೈಲಾಸವೈದುದೆ (ಹಳ) ಕೈಲಾಸವಿದ್ದುದೇ (ಸ)

ದೇವಲೋಕ–ಮರ್ತ್ಯಲೋಕವೆಂಬುದು ಬೇರಿಲ್ಲ [1]ಕಾಣಿರಣ್ಣ[1]
ಸತ್ಯವ ನುಡಿವುದೇ ದೇವಲೋಕ !
ಮಿಥ್ಯವ ನುಡಿವುದೇ ಮರ್ತ್ಯಲೋಕ !
ಆಚಾರವೇ ಸ್ವರ್ಗ !
ಅನಾಚಾರವೇ ನರಕ !
[2]ನೀವೇ ಪ್ರಮಾಣು ಕೂಡಲಸಂಗಮದೇವ ![2] 30

ದೇವಲೋಕವೆಂಬುದು ಆಕಾಶದಲ್ಲೆಲ್ಲೂ ಇಲ್ಲ, ಅದಿರುವುದು ಈ ನೆಲದ ಮೇಲೇ. ಸತ್ಯವನ್ನು ಬಳಸಿದರೆ ಆ ಸುತ್ತಮುತ್ತೆಲ್ಲ ದೇವಲೋಕವಾಗಿ ಮಾರ್ಪಡುವುದು. ಎಂದಿನಂತೆ ಮಿಥ್ಯಾಚಾರವನ್ನೇ ಮುಂದುವರಿಸಿದರೆ, ನಾವು ನಿಂತ ಹೊಲಮೇರೆಯೆಲ್ಲ ಅದೇ ಮರ್ತ್ಯಲೋಕವಾಗಿ ಉಳಿದಿರುವುದು. ಸ್ವರ್ಗ–ನರಕಗಳ ಮಾತಾದರೂ ಅಷ್ಟೇ. ಅನಾಚಾರದಿಂದ ಈ ನೆಲವೇ ನರಕವಾಗುವುದು. ಸದಾಚಾರದಿಂದ ಅದೇ ಸ್ವರ್ಗವಾಗುವುದು. ಎಂದೇ ಪ್ರತಿಯೊಬ್ಬರೂ ಈ ಭೂಲೋಕದಲ್ಲಿ ತಮ್ಮ ತಮ್ಮ ಪರಿಧಿಯಷ್ಟು ಪ್ರದೇಶವನ್ನಾದರೂ ಸತ್ಯದಿಂದ ಸದಾಚಾರದಿಂದ ದೇವಲೋಕವಾಗಿಸಬೇಕು, ಸ್ವರ್ಗವಾಗಿಸಬೇಕು !

---

[1] (ಹಸು) ಕಾಣಿಭೋ (ಹಳ) (ಸ) (ಕ) (ಚ) ಕಾಣಿರೋ (ನಿ) ಕಾಣಿರೇ (ಏ)
[2] (ಏ) ಕೂಡಲ ಸಂಗಮದೇವ ನೀವೇ ಪ್ರಮಾಣು (ಅನ್ಯತ್ರ)

ದೇವಲೋಕ–ಮರ್ತ್ಯಲೋಕವೆಂಬ ಸೀಮೆಯುಳ್ಳನ್ನಕ್ಕ
ಕೇವಲ ಶರಣನಾಗಲರಿಯ !
ಸತ್ತು ಬೆರೆಸಿಹೆನೆಂದರೆ
ಕಬ್ಬಿನ ತುದಿಯ ಮೆಲಿದಂತೆ
ಕೂಡಲ ಸಂಗಮದೇವ ! 31

ನಾನು ಹುಟ್ಟಿರುವುದು ಈ ಮರ್ತ್ಯಲೋಕದಲ್ಲಿ, ಹೋಗಿ ಬಾಳಬೇಕಾದುದು ಆ ದೇವಲೋಕದಲ್ಲಿ. ಈ ಮರ್ತ್ಯಲೋಕ ಮಣ್ಣುಮಯ, ಆ ದೇವಲೋಕ ಚಿನ್ನಮಯ ಎಂದು ನಡೆದವನು ವಂಚಿತನಾಗುತ್ತಾನೆ. ಬಾಳಬೇಕಾದುದು ಇಲ್ಲಿ, ಈ ಮರ್ತ್ಯಲೋಕದಲ್ಲಿ. ಚೆನ್ನಾಗಿ ಬಾಳಿದರೆ ನಮ್ಮ ಬದುಕು ಚಿನ್ನವಾಗುವುದು ಇಲ್ಲೆ, ಈ ಮರ್ತ್ಯಲೋಕದಲ್ಲೇ ! ಇದನ್ನರಿಯದೆ ಸತ್ತು ಸ್ವರ್ಗದಲ್ಲಿ ಸುಖಿಸುವೆನೆಂದರೆ— ಮಣ್ಣಿಗೆ ಹತ್ತಿರವಾಗಿರುವುದೆಂದು ಕಬ್ಬಿನ ಸಾರವತ್ತಾದ ಅಡಿ ಭಾಗವನ್ನು ತಿರಸ್ಕರಿಸಿ ಬಿಟ್ಟು, ಸಾರಹೀನವಾದ ತುದಿಯ ತೊಂಡೆ ಜೊಂಡನ್ನು ತಿಂದಂತೆ ಗಾಂಪತನವಾದೀತು.

ಎರಡನೆಯದಾಗಿ ಇಲ್ಲಿ ಬಸವಣ್ಣನವರು ತಮ್ಮ ಕಾಲಕ್ಕೆ ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಆತ್ಮಹಿಂಸೆಯನ್ನೂ, ಆತ್ಮಹತ್ಯೆಯನ್ನೂ ಕುರಿತು ವಿಷಣ್ಣವಿಡಂಬನೆ ಮಾಡಿರುವರು.

ಲಿಂಗದಲ್ಲಿ ಸಮ್ಯಕ್ಕರು
ಲಿಂಗದಲ್ಲಿ [1]ಸಮರ್ಥರು[1]
ಲಿಂಗದಲ್ಲಿ ಸೊಮ್ಮು ಸಂಬಂಧವನರಿತ ಸ್ವಾಮಿ ಭೃತ್ಯರೆಲ್ಲರೂ
ನಿಮ್ಮ [2]ಬೇಡೆನಂಜದಿರಂಜದಿರಿ ![2]
ಎನಗೆ ಮರ್ತ್ಯಲೋಕದ ಮಹಾಗಣಂಗಳುಂಟು !
ಇದು ಕಾರಣ,
ಕೂಡಲಸಂಗಮದೇವರ ಲೋಕವ
ಹಂಚಿಕೊಳ್ಳಿ, ನಿಮನಿಮಗೆ ! 32

ಬಸವಣ್ಣನವರಿಗೆ ಶಿವಲೋಕವೆಂದರೆ, ಅಲ್ಲಿಯ ಫಲ–ಪದವಿಗಳೆಂದರೆ ಆಕರ್ಷಣೆಯೇನೂ ಇಲ್ಲ. ಅವರಿಗೆ ತಾವು ನಡೆದಾಡುವ ಈ ಭೂಮಿಯೇ ಕೈಲಾಸ, ಭೂಲೋಕದ ಮಹನೀಯರ ಸೇವೆಯೇ ಸಕಲ ಸಂಪತ್ತು. ಜಂಗಮಲಿಂಗ ಸ್ವರೂಪಿಗಳಾದ ಜನಕೋಟಿಯ ಪರಿಚರ್ಯೆ–ಉದ್ಧರಣೋದ್ಯೋಗದ ಕಡೆ ಅವರು ಸದಾ ಮನ ತೆತ್ತವರು. ಆದುದರಿಂದಲೇ ಕೈಲಾಸದಲ್ಲಿ ತುಂಬಿಕೊಂಡು ಶಿವಸಂಪತ್ತಿನ ದಾಯಾದಿಗಳಂತೆ ಹಾತೊರೆಯುತ್ತಿರುವ ಪ್ರಮಥಗಣ–ರುದ್ರಗಣಗಳನ್ನು ಕುರಿತು ಹೇಳುತ್ತಾರೆ—ಈ ಮರ್ತ್ಯಲೋಕದ ಶಿವಶರಣರೇ ನನಗೆ ಸರ್ವಸ್ವ, ಕೈಲಾಸರಾಜ್ಯಶ್ರೀಯನ್ನು ನಿಮ್ಮ ನಿಮ್ಮಲ್ಲೇ ಹಂಚಿಕೊಳ್ಳಿ–ಅದಕ್ಕೆ ನಾನು ನಿಮ್ಮೊಡನೆ ಸ್ಪರ್ಧಿಸುವನಲ್ಲ, ನೀವು ಬಿಟ್ಟುಹೋದ "ಇಹ"ವನ್ನೇ "ಶಿವಪ್ರಸಾದ"ವೆಂದು ಸ್ವೀಕರಿಸುತ್ತೇನೆ—ಎಂದು ನಿಜವಾದ ಶಿವಪುತ್ರನಂತೆ ಉದ್ಘೋಷಿಸಿರುವರು.

[1] ಸಮರ್ಥರು (ಹಳ)
[2] (ಜ) ಬೇಡೆನಂಜದಿರಿ (ಅನ್ಯತ್ರ)

ಜಗವ ಸುತ್ತಿಪ್ಪುದು ನಿನ್ನ ಮಾಯೆಯಯ್ಯ !
ನಿನ್ನ ಸುತ್ತಿಪ್ಪುದು ನನ್ನ ಮನ ನೋಡಯ್ಯ !
[1]ಜಗಕ್ಕೆ ಬಲ್ಲಿದ ನೀನು
ನಿನಗೆ ಬಲ್ಲಿದ ನಾನು[1] ಕಂಡಯ್ಯ !
[2]ಜಗವು ನಿನ್ನೊಳಗೆ, ನೀನು ನನ್ನೊಳಗೆ ![2]
ಕರಿಯು ಕನ್ನಡಿಯೊಳಡಗಿದಂತಯ್ಯ
[3]ನೀನೆನ್ನೊಳಡಗಿದೆ,[3] ಕೂಡಲಸಂಗಮದೇವ ! 33

ಶಿವಶಕ್ತಿಯು ವಿಶ್ವವನ್ನೇ ವ್ಯಾಪಿಸಿಕೊಂಡಿರಬಹುದು. ಆದರೆ ಆ ಶಿವನನ್ನೇ ತನ್ನ ಅಂತರಂಗದಲ್ಲಿ ಅಡಗಿಸಿಕೊಂಡಿರುವನು ಧ್ಯಾನಕೌಶಲದಿಂದ ಭಕ್ತ. ಇದನು ಕುರಿತು ಕ್ಷಣಮಾತ್ರವಾದರೂ ಸರಿಯೆ ಆಲೋಚಿಸಿದವರಿಗೆ ಅಚ್ಚರಿ ಎನಿಸದಿರದು ! ಸಾಂತವು ಅನಂತದಲ್ಲಿ ಅಡಗುವುದೇನೂ ಅದ್ಭುತವಲ್ಲ, ಆದರೆ ಸಾಂತವು ಅನಂತವನ್ನು ತನ್ನಲ್ಲಿ ಅಡಗಿಸಿಕೊಳ್ಳುವುದಿದೆಯಲ್ಲಾ ಅದು ಮಹದದ್ಭುತ ! ಸಾಂತನಾದ ಜೀವನಿಗೆ ಈ ಮಹದದ್ಭುತಸಾಮರ್ಥ್ಯ ಸಾಧ್ಯವಾದುದು ಆ ಶಿವಧ್ಯಾನದಿಂದಲೇ ಎಂದು ಹೇಳುವರು ಬಸವಣ್ಣನವರು. ಹಾಗೆ ಹೇಳುವಲ್ಲಿ ಅವರು ತಮಗೆ ಸಹಜವಾದ ವೀರಶೈಲಿಯಲ್ಲಿ—ದೇವರೇ ನೀನುಜಗದ್ವ್ಯಾಪಿಯಿರಬಹುದು. ನಾನು ನಿನಗಿಂತಲೂ ವ್ಯಾಪಕ. ನಿನ್ನನ್ನೇ ನನ್ನ ಹೃದಯ ಕಮಲದಲ್ಲಿ ಸೆರೆಹಿಡಿದಿರುವೆನಲ್ಲಾ ಎಂದು ಧೀರವಾಗಿ ಸರಸವಾಡಿ, ಆನೆಯ ಬಿಂಬ ಎಷ್ಟೇ ದೊಡ್ಡದಾದರೂ ಅದನ್ನು ಪ್ರತಿಬಿಂಬ ಸೂತ್ರದಿಂದ ಗ್ರಹಿಸುವ ಕನ್ನಡಿಯ ಪ್ರತಿಭೆಯ ನಿದರ್ಶನವನ್ನು ಕೊಟ್ಟಿರುವರು.

ದೇವರು ದೊಡ್ಡವನಿರಬಹುದು ; ಆದರೆ ದೈವಭಕ್ತನು ಕುಬ್ಜನಲ್ಲವೆಂಬುದೇ ಬಸವಣ್ಣನವರ ಧೀರ ನಿಲವು. ಅಂತರಂಗದ ಮತ್ತು ಬಹಿರಂಗದ ವಿರುದ್ಧಶಕ್ತಿಗಳೊಡನೆ ಅಡಿಗಡಿಗೂ ತುಯ್ದಾಡಿ ಹೊಯ್ದಾಡಿ ಊರ್ಧ್ವಪಥಗಾಮಿಯಾಗ ಬೇಕಾದ ಸಾಧಕಜೀವಕ್ಕೆ ಈ ವಿಧವಾದ ಅದಮ್ಯ ಅನುಪಮ ಆತ್ಮವಿಶ್ವಾಸವಿಲ್ಲದಿದ್ದರೆ ಹೇಗೆ ?

---

1 (ಲಿ) ನೀನು ಜಗಕ್ಕೆ ಬಲ್ಲಿದನು, ನಾನು ನಿನಗೆ ಬಲ್ಲಿದನು (ಸ) (ನ)
ಜಗಕ್ಕೆ ಬಲ್ಲಿದ ನೀನು ಆನು ನಿನಗೆ ಬಲ್ಲಿದನು (ಕ) (ಹಳ)
ನೀನು ಜಗಕ್ಕೆ ಬಲ್ಲಿದನು ನಿನಗೆ ನಾನು ಬಲ್ಲಿದನು (ಶೂ)

2 (ಲಿ) × (ಅನ್ಯತ್ರ)

3 (ಲಿ) ಎನ್ನೊಳಗೆ ನೀನಡಗಿದೆ (ಅನ್ಯತ್ರ)

ಜಂಬೂದ್ವೀಪ–ನವಖಂಡ ಪೃಥ್ವಿಯೊಳಗೆ
ಕೇಳಿರಯ್ಯ—ಎರಡಾಳಿನ ಭಾಷೆಯ !
ಕೊಲುವೆನೆಂಬ ಭಾಷೆ ದೇವನದು !!
ಗೆಲುವೆನೆಂಬ ಭಾಷೆ ಭಕ್ತನದು !!
ಸತ್ಯವೆಂಬ [1]ಕೂರಲಗ[1] ಕಳೆದುಕೊಂಡು
[2]ಸದ್ಭಕ್ತರು[2] ಗೆದ್ದರು ಕಾಣ ಕೂಡಲಸಂಗಮದೇವ ! 34

ಸತ್ವಶಾಲಿಯಾದುದು ಮತ್ತು ಆಗಬಲ್ಲುದು ಮಾತ್ರ ಉಳಿಯಬೇಕು, ಸತ್ವ ಹೀನವಾದುದು ಅಳಿಯಬೇಕು. ಇದು ಜಗಜ್ಜೀವಸೂತ್ರ. ಅದಕ್ಕೆ ಸೂತ್ರಧಾರ ಶಿವ ನಾದರೆ ಆ ಸೂತ್ರಕ್ಕೆ ಬದ್ಧನಾಗಿರುವಾತನು ಜೀವ. ಸತ್ವಪರೀಕ್ಷೆಗಾಗಿ ಶಿವನು ಒಡ್ಡುವ ವ್ಯೂಹಗಳನ್ನೆಲ್ಲ ಜೀವನು ಭೇದಿಸಿ ವಿಜಯಿಯಾಗಿ ಹೊರಬರಬೇಕು. ಇಂತಹ ಸಾಹಸ ಕಾರ್ಯಕ್ಕಾಗಿ ಅವನು ಬಳಸಬೇಕಾದುದು ಸತ್ಯವನ್ನೇ ಹೊರತು ಕೌಟಿಲ್ಯವನ್ನಲ್ಲ, ಕೋರಿಕೆಯನ್ನೇ ಹೊರತು ತೋರಿಕೆಯನ್ನಲ್ಲ. ಪುರಾತನ ಭಕ್ತವರೇಣ್ಯರನೇಕರು ಈ ಸತ್ಯವೆಂಬ ಖಡ್ಗವನ್ನು ಹಿಡಿದೇ ಹಿಂದೆ ಯಶಸ್ವಿಗಳಾಗಿದ್ದಾರೆ.

ಅಥವಾ

ದೈವ ಮತ್ತು ಪೌರುಷ ಶಕ್ತಿಗಳೆರಡಕ್ಕೆ ಘರ್ಷಣೆಯಾದಾಗ ದೈವ ಕೊಲ್ಲುವೆ ನೆಂದರೆ ಪೌರುಷ ಗೆಲ್ಲುವೆನೆಂದು ಹೆಣಗಾಡಬೇಕು. ಪೌರುಷದ ತೋಳಿನಲ್ಲಿ ಸತ್ಯದ ಶಾತಖಡ್ಗವಿದ್ದರೆ ಅದಕ್ಕೆ ಜಯ ನಿಶ್ಚಯ ; ಇದಕ್ಕೆ ಹಲವಾರು ಸದ್ಭಕ್ತರ ಸಾಹಸ ಮಯ ಜೀವನಗಳ ನಿದರ್ಶನವುಂಟು.

---

1 (ಲಿ) ಕೂರಲಗನೆ (ಅನ್ಯತ್ರ)
2 ಭಕ್ತರು (ಲಿ)

ಉಳ್ಳವರು ಶಿವಾಲಯವ [1]ಮಾಡಿಹರು ! 1
ನಾನೇನ ಮಾಡುವೆ ಬಡವನಯ್ಯ !
ಎನ್ನ ಕಾಲೇ ಕಂಭ ! ದೇಹವೇ ದೇಗುಲ !
ಶಿರ ಹೊನ್ನ ಕಳಶವಯ್ಯ !
ಕೂಡಲ ಸಂಗಮದೇವ ಕೇಳಯ್ಯ—
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ ! 35

ಶಿವಭಕ್ತಿಯನ್ನು ಸಾರಲು ಕೈಲಾಸಪರ್ವತಸ್ಪರ್ಧಿಯಾಗಿ ಕಟ್ಟಿಸಿದ ಮೂಕ-ನಿಶ್ಶೇಷ್ಟಶಿವಾಲಯಗಳು ಇಂದಿದ್ದು ನಾಳೆ ಕುಸಿಯಬಹುದು. ಆದರೆ ಭದ್ರೇಚ್ಛೆಯ ಮಂಗಳಾಕಾಂಕ್ಷೆಯ ಶಿವಜೀವಸಂತಾನ ನಿರ್ಮಿತವಾದರೆ, ಅವು ತಮ್ಮ ನುಡಿವಳಿಯಲ್ಲಿ ಮತ್ತು ನಡೆವಳಿಯಲ್ಲಿ ಶಿವಸಂದೇಶವನ್ನು ಆಚರಿಸಿ ತೋರಿ—ಸಂತತಿ ಸಂತತಿಯಾಗಿ ಸಂತತವಾಗಿರುವವು. ಈ ಸಂತಸಂತತಿಯ ನಿರ್ಮಾಣದ ಕಡೆಗೆ ನಮ್ಮ ಅವಧಾರಣೆಯಿರಬೇಕೆಂಬುದು ಬಸವಣ್ಣನವರ ಆಶಯ. ದೇವಾಲಯ ನಿರ್ಮಾಣ ಬಹಿಸ್ಸಂಪತ್ತನ್ನು ಅವಲಂಬಿಸಿದರೆ, ಸಂತನಿರ್ಮಾಣ ಅಂತಸ್ಸಂಪತ್ತಿಯನ್ನು ಅವಲಂಬಿಸಿದೆ. ಮೊದಲನೆಯದು ಧನವ್ಯಯಮಾತ್ರ ಸಾಧ್ಯವಾಗಿರುವುದರ ಜೊತೆಗೆ ಅಶಾಶ್ವತವೂ ಹೌದು ! ಎರಡನೆಯದೋ, ಮನವ್ಯಯಮಾತ್ರ ಸಾಧ್ಯವಾಗಿರುವುದರ ಜೊತೆಗೆ, ಅದು ಶಾಶ್ವತವೂ ಸುಲಭವೂ ಆಗಿದೆ. ಆದುದರಿಂದಲೇ ಬಸವಣ್ಣನವರುಹೇಳುತ್ತಾರೆ —ನಮ್ಮ ದೇಹವೇ ದೇವಾಲಯವಾಗಬೇಕು. ಕಲಶಕ್ಕೆ ಕಂಭ ಆಧಾರವಾದಂತೆ, ಜ್ಞಾನಕ್ಕೆ ಆಚರಣೆ ಆಧಾರವಾಗಿ, ಅಲ್ಲಿ ದೇವರು ಬಂದು ನೆಲಸುವಂತಾಗಬೇಕು—ಎಂದು.

---

1(ಚ) (ನಿ) ಮಾಡುವರು (ಹಳ) (ಸ)

ಕರಿ ಘನ! ಅಂಕುಶ ಕಿರಿದೆನ್ನಬಹುದೇ? [1]ಬಾರದಯ್ಯ![1]
ಗಿರಿ ಘನ! ವಜ್ರ ಕಿರಿದೆನ್ನಬಹುದೇ? [1]ಬಾರದಯ್ಯ![1]
ತಮಂಧ ಘನ! ಜ್ಯೋತಿ ಕಿರಿದೆನ್ನಬಹುದೇ? [1]ಬಾರದಯ್ಯ![1]
ಮರಹು ಘನ! ನಿಮ್ಮ [2]ನೆನೆವ ಮನ[2] ಕಿರಿದೆನ್ನಬಹುದೇ? [3]ಬಾರದಯ್ಯ
ಕೂಡಲ ಸಂಗಮದೇವ![3] 36

ಮಾಡಬೇಕಾದ ಸಾಧನೆ ದೊಡ್ಡದು, ನಾನು ಚಿಕ್ಕವನು, ನನ್ನ ಮನ ಚಿಕ್ಕದೆಂದು ಯಾವನೂ ತನ್ನ ಮೋರೆಯನ್ನು ಜೋಲಿಕ್ಕಬೇಕಾಗಿಲ್ಲ. ಸೊಕ್ಕೇರಿದ ಆನೆಯ ಗಾತ್ರದ ಮುಂದೆ—ಬಾಗಿ ನಿಂತ ಅಂಕುಶವದೆಷ್ಟು ಚಿಕ್ಕದು? ಆದರೇನು ಅದು ಆನೆಯ ಸೊಕ್ಕಿಳಿಸದೆ ಬಿಟ್ಟೀತೆ? ಬೆಟ್ಟವೆಷ್ಟು ದೊಡ್ಡದಾದರೇನು? ಎರಗಿ ಬರುವ ಸಿಡಲಿನ ಎಳೆ ಅದನ್ನು ಸೀಳದೆ ಬಿಟ್ಟೀತೆ? ಆವರಿಸಿರುವ ಅಂಧಕಾರವದೆಷ್ಟು ಮಂದವಾಗಿದ್ದರೇನು? ಕಿರುದೀವಿಗೆಯ ನವಿರು–ಮಿರುಗು ಅದನ್ನು ಕರಗಿಸದೆ ಬಿಟ್ಟೀತೆ? ಹಾಗೆಯೇ ಮನಸ್ಸು ಕಿರಿದಾದರೇನು? ಅದು ಭಕ್ತಿಯ ಕಮ್ಮಟದಲ್ಲಿ ಕಾದು, ಧ್ಯಾನದ ರಸವುಂಡು ಹದವಾದರೆ, ಭವದ ಬೇರನ್ನು ಛಿನ್ನಭಿನ್ನ ಮಾಡುವುದು!

---

[1] ಅಯ್ಯ ಬಾರದಯ್ಯ (ಶೂ R)
[2] ನೆನಹು (ಶೂ)
[3] ಕೂಡಲ ಸಂಗಮದೇವ ನಿಮ್ಮ ಕೃಪೆಯ ಘನವ ಸೀಪೆ ಬಲ್ಲಿರಿ (ಶೂ)

ಜ್ಞಾನದ ಬಲದಿಂದ ಅಜ್ಞಾನ'ದ ಕೇಡು' ನೋಡಯ್ಯ !
ಜ್ಯೋತಿಯ ಬಲದಿಂದ ತಮಂಧ'ದ ಕೇಡು' ನೋಡಯ್ಯ !
ಸತ್ಯದ ಬಲದಿಂದ ಅಸತ್ಯ'ದ ಕೇಡು' ನೋಡಯ್ಯ !
ಪರುಷದ ಬಲದಿಂದ ಅವಲೋಹ'ದ ಕೇಡು' ನೋಡಯ್ಯ
[2]ಕೂಡಲ ಸಂಗನ ಶರಣರ ಅನುಭಾವದಿಂದ
ಎನ್ನ ಭವದ ಕೇಡು ನೋಡಯ್ಯ[2] ! 37

ಬೆಳಕಿನ ಬಲದಿಂದ ಕತ್ತಲೆಯು ಕೆಟ್ಟೋಡುವಂತೆ, ತಿಳಿವಿನ ಬಲದಿಂದ ಅಜ್ಞಾನವು ಹರಿಯುವುದು. ಸ್ಪರ್ಶಮಣಿಯ ಸೋಂಕಿನ ಬಲದಿಂದ ಕಬ್ಬಿಣ ಮುಂತಾದುವುಗಳ ಅವಲೋಹತ್ವ ಹಾಳಾಗುವಂತೆ, ಸತ್ಯದ ಬಲದಿಂದ ಅಸತ್ಯದ ಹಾವಳಿ ಹುಟ್ಟಡಗುವುದು. ಹಾಗೆಯೇ ಶರಣರೊಡನೆ ನಡೆಸುವ ಸಂಭಾಷಣೆ ಮತ್ತು ಸತ್ಪ್ರಸಂಗಗಳ ಬಲದಿಂದ ನಮ್ಮ ಅಜ್ಞಾನ ಅಡಗಿ, ಸುಜ್ಞಾನ ಸೆಲೆದೋರಿ, ಹುಟ್ಟು, ಸಾವುಗಳ ಬವಣೆ ಬತ್ತುವುದು.

[1] ಕೆಡುವುದು (ಶೂ)

[2] (ಚ) (ಪಳ) ಕೂಡಲಸಂಗನ ಶರಣರ ಅನುಭಾವದಿಂದ ಎನ್ನ ಮನದ ಕೇಡೆ
ನೋಡಯ್ಯ (ಸ)
ಸಂಗಮದೇವಯ್ಯ ನಿಮ್ಮ ಅನುಭಾವದಿಂದ ಎನ್ನ
ಭವಕೆಟ್ಟುದನಸ್ಲೆನಬಹುದೇ ಪ್ರಭುವೆ (ಶೂ)

ಅತ್ತಲಿತ್ತಲು ಹೋಗದಂತೆ ಹೆಳವನ ಮಾಡಯ್ಯ ತಂದೆ!
ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ!
ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ!
ನಿಮ್ಮ ಶರಣರ ಪಾದವಲ್ಲದೆ
ಅನ್ಯ ವಿಷಯ'ಕ್ಕೆಳಸದಂತಿರಿಸು[1] ಕೂಡಲಸಂಗಮದೇವ! 38

ಶರಣರ ಪಾದಸಾನ್ನಿಧ್ಯವೇ ಪುಣ್ಯಕ್ಷೇತ್ರ, ಶರಣರ ಪಾದಸಂದರ್ಶನವೇ ದಿವ್ಯ ದರ್ಶನ ಮತ್ತು ಶರಣರ ಪಾದ ಮಹಿಮಾ ಸಂಕೀರ್ತನೆಯೆ ಶ್ರವಣ ಸುಧೆ! ಆ ಶರಣರ ದಿವ್ಯ ಪಾದಗಳಿಂದ ದೂರ ಸರಿದು, ಪುಣ್ಯಕ್ಷೇತ್ರವೆಲ್ಲಿದೆಯೆಂದು ಅರಸುತ್ತ ಅಲೆಯಬೇಕಾಗಿಲ್ಲ. ಅನುಸರಿಸಬೇಕಾದ ಆಧ್ಯಾತ್ಮಿಕಮಾರ್ಗವಾವುದೆಂದು ದಿಕ್ಕು ತಪ್ಪಿ ಕಂಗೆಡಬೇಕಾಗಿಲ್ಲ, ವಿವಿಧ ಪ್ರವಾದ ವಿವಾದಗಳ ಭೋರ್ಗರೆತದಲ್ಲಿ ಭಾಗಿಯಾಗ ಬೇಕಾಗಿಲ್ಲ. ಶರಣರ ಪಾದಸೇವೆಯೇ ನನಗೆ ಸರ್ವಸ್ವ. ಅನ್ಯ ವಿಷಯಗಳತ್ತ ಹರಿದಾಡದಂತೆ ನನ್ನ ಮನಸ್ಸನ್ನು ಏಕಾಗ್ರವಾಗಿರಿಸು—ಎಂದು ಸೇವಾಯೋಗ ಮಾರ್ಗಪಥಿಕರಾದ ಸಜ್ಜೀವರ ಪ್ರತಿನಿಧಿಯಾಗಿ ಶಿವನನ್ನು ಪ್ರಾರ್ಥಿಸುತ್ತಿರುವರು— ಬಸವಣ್ಣನವರು.

---

1 (ಚ) ಕ್ಕೆಳಸದಂತೆ ಇರಿಸು (ಅಸ್ಪಷ್ಟ)

ಅಂದಣವನೇರಿದ ಸೊಣಗನಂತೆ
ಕಂಡರೆ ಬಿಡದು ಮುನ್ನಿನ ಸ್ವಭಾವವನು !
ಸುಡು, ಸುಡು ! ಮನವಿದು ವಿಷಯಕ್ಕೆ ಹರಿವುದು !
ಮೃಡ, ನಿಮ್ಮನನುದಿನ ನೆನೆಯಲೀಯದು !!
ಎನ್ನೊಡೆಯ ಕೂಡಲ ಸಂಗಮದೇವ
ನಿಮ್ಮ ಚರಣವ ನೆನೆವಂತೆ ಕರುಣಿಸು
ಸೆರಗೊಡ್ಡಿ ಬೇಡುವೆ ನಿಮ್ಮ ಧರ್ಮ ! 39

ಈ ಮನವನ್ನು ಸದಾ ಶಿವಧ್ಯಾನದಲ್ಲಿ ತೊಡಗಿಸಿ, ಅದನ್ನು ಉದಾತ್ತವಾದ ನೆಲೆಯಲ್ಲಿಯೇ ನಿಲ್ಲಿಸಿರಬೇಕೆಂಬುದು ನನ್ನ ಹಾರೈಕೆಯಾದರೂ—ಅದು ಪೂರೈಕೆ ಯಾಗುತ್ತಿಲ್ಲ. ನನ್ನ ಮನಸ್ಸಾದರೋ ವಿಷಯೋಪಭೋಗಸಾಮುಗ್ರಿಗಳು ಕಣ್ಣಿಗೆ ಕಾಣುವವರೆಗೆ ಸ್ವಸ್ಥವಾಗಿದ್ದು, ಕಂಡೊಡನೆಯೇ, ತಾನೆ ಹಿಂದೆ ಹೀಗಳೆದು ಬಿಟ್ಟ ಹೇಯಗಳೆಂದು ಬಗೆದು ಹಿಂತೆಗೆಯದೆ, ಮತ್ತೆ ಮತ್ತೆ ಅವನ್ನೇ ಬಯಸಿ ಬಾತು ಬೀಳಾಗುವುದು. ಉಚ್ಚಧ್ಯೇಯದ ಮನಸ್ಸಿನ ಈ ನೀಚ ಪ್ರವೃತ್ತಿಯು ಪಲ್ಲಕ್ಕಿಯಲ್ಲಿ ಕುಳಿತ ನಾಯಿಯು ಮೂಳೆಯ ತುಂಡನ್ನು ಕಂಡೊಡನೆಯೇ ಕೆಳಕ್ಕೆ ನೆಗೆಯು ವುದನ್ನು ನೆನಪಿಗೆ ತರುವುದು. ದೇವರೇ ನನ್ನ ಮನದ ಈ ನಾಯಿತನವನ್ನು ಬಿಡಿಸಿ ಅದನ್ನು ನಿನ್ನ ನಿರಂತರ ಧ್ಯಾನದಲ್ಲಿರಿಸು.

ತನು ನಿಮ್ಮದೆಂದ ಬಳಿಕ ಎನಗೆ ಬೇರೆ ತನುವಿಲ್ಲ !
ಮನ ನಿಮ್ಮದೆಂದ ಬಳಿಕ ಎನಗೆ ಬೇರೆ ಮನವಿಲ್ಲ !
ಧನ ನಿಮ್ಮದೆಂದ ಬಳಿಕ ಎನಗೆ ಬೇರೆ ಧನವಿಲ್ಲ !
ಇಂತೀ ತ್ರಿವಿಧವೂ ನಿಮ್ಮದೆಂದರಿದ ಬಳಿಕ
ಎನಗೆ ಬೇರೆ ವಿಚಾರವುಂಟೇ ಕೂಡಲಸಂಗಮದೇವ !! 40

ನನ್ನ ತನು—ಮನ—ಧನ ಈ ಮೂರೂ ದೇವರಿಗರ್ಪಿತ. ಇವನ್ನು ನನ್ನ ಸ್ವಂತ ಸುಖಕ್ಕಾಗಲಿ, ಹೆಂಡತಿ ಮಕ್ಕಳ ಆಡಂಬರಕ್ಕಾಗಲಿ, ಬಂಧುಜನಪ್ರತಿಷ್ಠೆಗಾಗಲಿ ನಾನೆಂದೆಂದಿಗೂ ಬಳಸುವುದಿಲ್ಲ. ನನ್ನ ಸರ್ವಸ್ವ ಶಿವಾರ್ಪಿತವೆಂದಮೇಲೆ ಶಿವೇತರ ವಾದ ಯಾವುದರಲ್ಲೂ ನನಗೆ ಕಿಂಚಿತ್ತೂ ಚಿಂತೆಯಿಲ್ಲ.

ಹರಿವ ಹಾವಿಗಂಜೆ ! ಉರಿಯ ನಾಲಗೆಗಂಜೆ !
ಸುರಗಿಯ ಮೊನೆಗಂಜೆ !
ಒಂದಕ್ಕಂಜುವೆನೊಂದ[1]ಕ್ಕಂಜುವೆ !
ಪರಸ್ತ್ರೀ–ಪರಧನವೆಂಬೀ ಜೂಬಿಂಗಂಜುವೆ !
ಮುನ್ನಂಜದ [2]ರಾವಣನೇವಿಧಿಯಾದ ! ?
ಅಂಜುವೆನಯ್ಯ ಕೂಡಲಸಂಗಮದೇವ !

41

ಹೆಡೆಯೆತ್ತಿ ಸುರುಳಿ ಬಿಚ್ಚಿ ಸರಸರ ಹರಿದು ಬರುವ ದುರುಳಸರ್ಪಕ್ಕಂಜುವುದಿಲ್ಲ. ಏಳೆಳೆಯ ಉರಿಯ ನಾಲಗೆ ಚಾಚಿ, ಸುತ್ತ ಮುತ್ತಿ ಬರುವ ಮಹಾದಾವಾಗ್ನಿ ಜ್ವಾಲೆಗಂಜುವುದಿಲ್ಲ. ಹೊಟ್ಟೆಯನ್ನು ಹೋಳುಮಾಡಿ ಕರುಳೋಳಿಯನ್ನು ಹೊರ ಹೊಮ್ಮಿಸುವ ಮಿರುಮಿರುಗುವ ಮೊನೆಯಾದ ಸುರಗಿಗಂಜುವುದಿಲ್ಲ. ಪರಸ್ತ್ರೀ–ಪರ ಧನವೆಂಬೊಂದು ಘೋರ ಪಾಪಕ್ಕಲ್ಲದೆ ಮತ್ತಾವುದಕ್ಕೂ ಅಂಜುವುದಿಲ್ಲ. ಮೊದಲನೆಯ ಮೂರೂ ಕೇವಲ ಪ್ರಾಣಾಪಹಾರಿಗಳಾದರೆ, ಪ್ರಾಣವನ್ನು ಮಾನದ ಅನುಪಾನದೊಡನೆ ಆಪೋಶನಗೊಳ್ಳುವ ಅನ್ಯಕಾಮಿನೀಕಾಂಚನಗಳ ನಂಜಿನ ಉರಿಮೊನೆಗೆ ಶೀರ ಅಂಜವೆ ! ಅಂಜದೇ ಹೋದ ಹತ್ತುತಲೆಯ ರಾವಣನು ಯಾವ ದಾರಿ ಹಿಡಿದನೆಂಬುದನ್ನು ಬಲ್ಲೆ ! ನನ್ನೊಡೆಯ ಕೂಡಲ ಸಂಗಮದೇವ, ಅಂಜುವೆ ಸ್ವಾಮಿ.

---

[1] (ನಿ) ಕ್ಕಳುಕುವೆ (ಅನ್ಯತ್ರ)
[2] ರಾವಣನೇ ವಿಧಿಗೊಳಗಾದ (ಚ)

ತೊರೆಯ ಮೀವ ಅಣ್ಣಗಳಿರಾ
ತೊರೆಯ ಮೀವ ಸ್ವಾಮಿಗಳಿರಾ
ತೊರೆಯಿಂ ಭೋ! ತೊರೆಯಿಂ ಭೋ!
ಪರನಾರಿಯ ಸಂಗವ ತೊರೆಯಿಂ ಭೋ!
ಪರಧನ[1]ದಾಮಿಷವ[1] ತೊರೆಯಿಂ ಭೋ!
ಇವ ತೊರೆಯದೆ ಹೋಗಿ ತೊರೆಯ ಮಿಂದರೆ
ಬರುದೊರೆ ಹೋಹುದು ಕೂಡಲಸಂಗಮದೇವ! 42

ಮನೆಯ ನೀರು ಮೈಲಿಗೆಯೆಂದು ಪುಣ್ಯತೀರ್ಥವೆನಿಸಿದ ತೊರೆಯಲ್ಲಿ ಮೈ ತೊಳೆಯುತ್ತಿರುವ ಸ್ವಾಮಿಗಳಿರಾ ಕಿವಿಗೊಟ್ಟು ಕೇಳಿ! ತೊರೆಯಲ್ಲಿ ಮೀಯುವುದಕ್ಕೆ ಮುನ್ನ ಪರಸ್ತ್ರೀಯರ ಮೇಲಣ ಮೋಹವನ್ನು ತೊರೆಯಿರಿ, ಪರಧನದ ಮೇಲಣ ವ್ಯಾಮೋಹವನ್ನು ತೊರೆಯಿರಿ. ಇವನ್ನು ತೊರೆಯದೆ ಹೋಗಿ ಬರಿದೆ ತೊರೆಯಲ್ಲಿ ಮಿಂದರೆ, ಅದು ನಿಮ್ಮ ಪಾಪನ್ನು ತೊಳೆಯದೆ, [ಬರಿಯ (ಬುರುದೆ) ನೀರಾಗಿ,] ವ್ಯರ್ಥವಾಗಿ ಹರಿದುಹೋಗುವುದು.

ಎಲ್ಲಿ [2]ನೋಡಿದರಲ್ಲಿ[2] ಮನವೆಳಸಿದರೆ
ಆಣೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ!
ಪರವಧುವನು [3]ಮಾದೇವಿಯೆಂದೇ ಕಾಬೆ[3]
ಕೂಡಲಸಂಗಮದೇವ! 43

ಎಲೆ ಶಿವನೆ, ನನ್ನ ಚಿತ್ತ ಸಿಕ್ಕಿದತ್ತ ಚಂಚಲಿಸಿದರೆ, ನಿನಗೂ ನಿನ್ನ ಪರಿಜನಕ್ಕೂ ಹೊರಗಾದವನು ನಾನು! ಹಾಗೆ ಮಾಡೆನೆಂದಿಗೂ! ಪರಸ್ತ್ರೀಯರನ್ನು ನನ್ನ ತಾಯಿಯೆಂದು, ಜಗನ್ಮಾತೆಯೆಂದು ಭಾವಿಸುವೆ.

---

[1] ದಾಶೆಯಾಮಿಷವ (ಜ)

[2] ನೋಡಿದಲ್ಲಿ (ಜ)

[3] (ಜ) ಮಹಾದೇವಿಯೆಂಬೆ (ಹಳ) ಮಾದೇವಿಯೆಂಬೆ (ನಿ) (ಕ)

ಆನೆಯನೇರಿಕೊಂಡು ಹೋದಿರೇ ನೀವು !
ಕುದುರೆಯನೇರಿಕೊಂಡು ಹೋದಿರೇ ನೀವು !
ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರೇ ಅಣ್ಣ !
ಸತ್ಯದ ನಿಲವನರಿಯದೇ ಹೋದಿರಲ್ಲಾ !
ಸದ್ಗುಣವೆಂಬ ಫಲವ 'ಬಿತ್ತದೇ'[1] ಬೆಳೆಯದೇ ಹೋದಿರಲ್ಲಾ
ಅಹಂಕಾರವೆಂಬ [2]'ಸದ'ಮದಗಜವೇರಿ
ವಿಧಿಗೆ ಗುರಿಯಾಗಿ ನೀವು ಹೋದಿರಲ್ಲಾ !
ನಮ್ಮ ಕೂಡಲಸಂಗಮದೇವರನರಿಯದೆ
ನರಕಕ್ಕೆ ಭಾಜನವಾದಿರಲ್ಲಾ !

44

ಎಲೇ ಶ್ರೀಮಂತ ಸಹೋದರರೇ ನೀವು ಎತ್ತರವಾದ ಕುದುರೆಯನ್ನು ಏರಿ ಹೋದಿರಿ, ಎಲ್ಲಕ್ಕೂ ಎತ್ತರವಾದ ಆನೆಯನ್ನೇರಿ ಹೋದಿರಿ! ಆದರೆ ನೀವು ಸತ್ಯದ ನೆಲೆಯನ್ನು ಕಾಣದೇ ಹೋದಿರಲ್ಲಾ !! ಕುಂಕುಮ-ಕಸ್ತೂರಿ ಮುಂತಾದ ಪರಿಮಳ ದ್ರವ್ಯವನ್ನು ಲೇಪಿಸಿಕೊಂಡು ಹೋದಿರಿ !! ಆದರೆ ನೀವು ಸದ್ಗುಣಪರಿಮಳವನ್ನು ಸುತ್ತೆಲ್ಲೂ ಬೀರದೆ ಹೋದಿರಲ್ಲಾ !! ನೀವು ಅಹಂಕಾರವೆಂಬ ಮದಿಸಿದಾನೆಯನ್ನೇರಿ ತುರಗವೇಗದಲ್ಲಿ ತ್ವರಿತವಾಗಿ ಸಾವಿನ ಬಾಯಿಗೇ ನೇರವಾಗಿ ಹೋದಿರಲ್ಲಾ ! ದೇವರ ಧ್ಯಾನ ಲವಲೇಶವೂ ಇಲ್ಲದೆ, ನರಕಭಾಜನರಾದಿರಲ್ಲಾ !

ತಮ್ಮಲ್ಲಿದ್ದ ಹಣವನ್ನು ಆತ್ಮೋನ್ನತಿಗಾಗಲಿ ಜನಹಿತಕ್ಕಾಗಲಿ ವಿನಿಯೋಗಿಸದೆ ಅದನ್ನು ವ್ಯರ್ಥಭೋಗಾಡಂಬರಕ್ಕಾಗಿ ವ್ಯಯಿಸಿ, ನರಲೋಕದಿಂದ ಬಾಹಿರರಾಗಿ, ನರಕ-ನಿಲಯರಾದ ನಿರ್ಭಾಗ್ಯಧನಿಕರನ್ನು ಕಂಡು ಬಸವಣ್ಣನವರು ಇಲ್ಲಿ ಮರುಗಿದ್ದಾರೆ.

---

[1] ಬಿತ್ತಿ (ಸ)
[2] x (ಹಳ)

ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ !
ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ !
ಮಾಡುವ–ನೀಡುವ ನಿಜಗುಣವುಳ್ಳಡೆ
ಕೂಡಿಕೊಂಬ ನಮ್ಮ ಕೂಡಲಸಂಗಮದೇವ ! 45

ಮನದ ನೆಚ್ಚುಗೆಯಿಲ್ಲದೆ, ಜನದ ಮೆಚ್ಚುಗೆಗಾಗಿ ಪೂಜೆ ಮುಂತಾದುವನ್ನು ಮಾಡಿ ಮಾಡಿ ಸತ್ತರು, ದಾನ–ದತ್ತಿಗಳನ್ನು ನೀಡಿ ನೀಡಿ ಸತ್ತರು ಡಂಬಾಚಾರಿಗಳು. ಅವರ ಉದ್ದೇಶ ಶುದ್ಧವಿಲ್ಲದುದರಿಂದಲೇ ಅವರು ಮಾಡಿದುದೊಂದೂ ಅವರ ಆತ್ಮೋ–ದ್ಧಾರಕ್ಕಾಗಲಿಲ್ಲ, ಅವರು ನೀಡಿದುದೊಂದೂ ಸತ್ಪಾತ್ರಕ್ಕೆ ಸಲ್ಲಲಿಲ್ಲ. ಮಾಡುವಲ್ಲಿ ನೀಡುವಲ್ಲಿ ಅಕೃತ್ರಿಮತೆಯಿದ್ದರೆ ಮಾತ್ರ ದೇವರು ಮೆಚ್ಚುವನು.

ಅಂಗದಿಚ್ಛೆಗೆ [1]ಮದ್ದು[1] ಮಾಂಸವ ತಿಂಬರು !
ಕಂಗಳಿಚ್ಛೆಗೆ ಪರವಧುವ ನೆರೆವರು !
ಲಿಂಗಲಾಂಛನಧಾರಿಯಾದಲ್ಲಿ ಫಲವೇನು ?
ಲಿಂಗಪಥವ ತಪ್ಪಿ ನಡೆವರು !
ಜಂಗಮ ಮುಖದಿಂದೆ ನಿಂದೆ ಬಂದರೆ
ಕೊಂಡ ಮಾರಿಂಗೆ ಹೋಹುದು ತಪ್ಪದು
ಕೂಡಲ ಸಂಗಮದೇವ ! 46

ಕಾಮಾತುರಗೊಂಡು, ಕಾಯ ಗಟ್ಟಿಯಾಗಲೆಂದು—ಮದನೋದ್ದೀಪಕವಾದ ಮದ್ದನ್ನೂ ಮಾಂಸವನ್ನೂ ತಿನ್ನುವರು. ಕಂಗಳು ತಪ್ಪಿ ಹೆರವರ ಹೆಂಗಳನ್ನು ತಬ್ಬುವರು. ಇಂಥವರು ಲಿಂಗವನು ಧರಿಸಿ ಫಲವೇನು ? ಅವರು ಹಿಡಿದ ಹಾದಿ ಲಿಂಗಮಂಗಲಮಾರ್ಗವಲ್ಲ ? ದೊಡ್ಡವರ ಕಡೆಯಿಂದ ಮೆಚ್ಚುಗೆಯನ್ನು ಗಳಿಸುವ ಬಾಳನ್ನು ಬದುಕದೆ, ಅವರಿಂದ ಛೀ ಎನಿಸಿಕೊಂಡರೆ, ಶಿವನ ಕೃಪೆಯಿಂದ ಪಡೆದ ಈ ಬದುಕು ಬೆಲೆಬಾಳದೇ ಹೋಗುವುದು.

---

1 (ಜ) ಮದ್ಯ (ಅನ್ಯತ್ರ)

ತನಗೆ ಮುನಿವರಿಗೆ ತಾ ಮುನಿಯಲೇಕಯ್ಯ ?
[1]ತನಗಾದ ಆಗೇನು ಅವರಿಗಾದ ಚೇಗೇನು[1] ?
ತನುವಿನ ಕೋಪ ತನ್ನ ಹಿರಿಯತನದ ಕೇಡು !
ಮನದ ಕೋಪ ತನ್ನ ಅರಿವಿನ ಕೇಡು !
ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ
[2]ನೆರೆಮನೆಯ ಸುಡದು[2] ಕೂಡಲಸಂಗಮದೇವ ! 47

ತನ್ನ ಮೇಲೆ ಕೋಪಗೊಂಡವರ ಮೇಲೆ ತಾನು ಕೋಪಗೊಂಡರೇನು ಬಂತು ! ನಾವು ಮಾಡಿದ ಕೋಪದಿಂದ ನಮಗಾದ ಲಾಭವೇನು ? ಅವರಿಗಾದ ನಷ್ಟವೇನು ? ನಮ್ಮಲ್ಲಿ ಉದಿಸಿದ ಕೋಪವೆಂಬ ಕಾಯವಿಕಾರದಿಂದ ನಮ್ಮ ಘನತೆಗೇ ಕೇಡು ! ನಮ್ಮಲ್ಲಿ ಉದಿಸಿದ ವೈರವೆಂಬ ಮನೋವಿಕಾರದಿಂದ ನಮ್ಮ ಅರಿವಿಗೇ ಕೇಡು ! ಮನೆಯೊಳಗೆ ಹುಟ್ಟಿದ ಬೆಂಕಿ ಮೊದಲು ಆ ಮನೆಯನ್ನೆಲ್ಲ ವ್ಯಾಪಿಸಿ ಸುಟ್ಟಲ್ಲದೆ, ನೆರೆಮನೆಯನ್ನು ಸುಡಲಾರದು—ಅಂತೆಯೇ ನಮ್ಮಲ್ಲಿ ಉಂಟಾದ ಕೋಪವೈರಗಳು ನಮ್ಮನ್ನು ಮೊದಲು ಸರ್ವನಾಶಪಡಿಸಿದಲ್ಲದೆ ಅನ್ಯರನ್ನು ನಾಶಪಡಿಸುವುದಿಲ್ಲ.

ಆದುದರಿಂದ ಪರರನ್ನು ನಾಶಪಡಿಸುವ ನಶೆಯಲ್ಲಿ ನಿನ್ನನ್ನು ನೀನೇ ನಾಶಪಡಿಸಿ ಕೊಳ್ಳಬೇಡ. ನಿನ್ನಲ್ಲಿ ಪ್ರತೀಕಾರ ಮನೋಭಾವವಿಲ್ಲದಿದ್ದರೆ ಇದಿರಾಳಿಗಳು ತಮ್ಮ ತಪ್ಪನ್ನು ತಿಳಿದು ತಿಳಿಯಾಗಿ ಬಾಳಿಯಾರು, ನೀನೂ ಬಾಳುವೆ ! ಇದರಿಂದ ನಿನ್ನ ಬಾಳುವೆ ದುಪ್ಪಟ್ಟು ಫಲದಾಯಕವಾಗುವುದು.

---

[1] ಅವರಿಗಾದ ಆಗೇನು, ತನಗಾದ ಚೇಗೆಯೇನು (ವ)
ತನಗಾದ ಆಗೇನು ಅವರಿಗಾದ ಚೇಗೆಯೇನು (ನಿ) (ಕ)
ತನಗಾದ ಆಗೇನು ಅಪರಿಗಾಪ ಚಾಗೆಯೇನು (ಜ)

[2] ನೆರೆಮನೆಯ ಸುಡುವುದೆ (ಕ)
ನೆರೆಮನೆ ಬೇವುದೇ (ಜ್ಞ)

ಧನದಲ್ಲಿ [ನಿರಾಶೆ][1], ಪ್ರಾಣದಲ್ಲಿ ನಿರ್ಭಯ
ಇವಾರಿಂಗಳವಡುವುದಯ್ಯ ? !
ನಿಧಾನ ತಪ್ಪಿ ಬಂದರೆ ಒಲ್ಲೆನೆಂಬವರಿಲ್ಲ !
[2]ಪ್ರಮಾದ ವಶ ಬಂದರೆ ಹುಸಿಯೆನೆಂಬವರಿಲ್ಲ !
ನಿರಾಶೆ–ನಿರ್ಭಯ, ಕೂಡಲಸಂಗಮದೇವ,
ನೀನೊಲಿದ ಶರಣಂಗಲ್ಲದಿಲ್ಲ ! 48:

ಹಣಕ್ಕೆ ಆಶೆ ಮಾಡದವರಾರು ? ಸಾವಿಗೆ ಭಯಪಡದವರಾರು ? ತಪ್ಪುದಾರಿಯಿಂದ ಲಕ್ಷ್ಮಿ ಬಂದು ತನ್ನೆದುರಿನಲ್ಲಿ ನಿಂತಾಗ ನಿಷ್ಕಾಂಕ್ಷೆಯ ನಿಲುವನ್ನು ಯಾರು ತಳೆದಾರು ? ಮರಣದಂಡನೆಯಾಗುವುದೆಂದಾಗಲೂ ಸತ್ಯಕ್ಕೆ ಅಪಚಾರವೆಸಗುವ ಸುಳ್ಳನ್ನು ನಾಲಗೆಗೆ ತಾರೆನೆಂದು ಯಾರು ಧೀರವಾಗಿ ನಿಂತಾರು ? ಈ ನಿಷ್ಕಾಂಕ್ಷೆ, ನಿರ್ಭಯಗಳೆರಡನ್ನೂ ತಮ್ಮ ಜೀವಿತದಲ್ಲಿ ಅಳವಡಿಸಿಕೊಂಡ ಮಹನೀಯರಾರು ? ಅಂಥವರು ಶಿವಶರಣರಲ್ಲದೆ ಮತ್ತಾರು ? !

1 ಶುಚಿ (ಸರ್ವತ್ರ)
2 ಪ್ರಮಾದವಶದಿಂ (ಸ)

ಲೋಕದ ಡೊಂಕ ನೀವೇಕೆ ತಿದ್ದುವಿರಿ ?
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ !
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ !
ನೆರೆಮನೆಯ ದುಃಖಕ್ಕೆ ಅಳುವರ ಮೆಚ್ಚ
ನಮ್ಮ ಕೂಡಲಸಂಗಮದೇವ. 49

ಮಾತೆತ್ತುತ್ತಲೇ ಲೋಕದ ಓರೆಕೋರೆಗಳನ್ನು ತಿದ್ದುವ ತಿಳಿಗೇಡಿತನವೇಕೆ ನಿಮಗೆ ? ಮೊದಲು ನಿಮ್ಮ ನಿಮ್ಮ ಆಚರಣೆಗಳನ್ನು ತಿದ್ದಿಕೊಳ್ಳಿ. ನಿಮ್ಮ ನಿಮ್ಮ ಆಲೋಚನೆಗಳನ್ನು ತಿದ್ದಿಕೊಳ್ಳಿ. ತನ್ನೊಬ್ಬನನ್ನೇ ಉತ್ತಮಪಡಿಸಿಕೊಳ್ಳಲಾರದವನು ಲೋಕೋದ್ಧಾರವನ್ನು ಹೇಗೆ ಮಾಡಿಯಾನು ? ಪ್ರತಿಯೊಬ್ಬನೂ ತನ್ನ ಮನ ಮತ್ತು ಮನೆಯನ್ನುನೇರ್ಪಡಿಸಿಕೊಳ್ಳಲಿ. ಈ ವ್ಯಷ್ಟಿಹಿತದಿಂದ ಸಮಷ್ಟಿಹಿತವು ತಾನಾಗಿಯೇ ಸಿದ್ಧಿಸುವುದು ಅಥವಾ ಆ ಸಮಷ್ಟಿಯ ಹಿತವನ್ನು ಸಾಧಿಸುವ ಸಾಮರ್ಥ್ಯ ವ್ಯಷ್ಟಿಗೇ ಸಿದ್ಧಿಸೀತು !

ತನ್ನ ಮನೆಯ ದುಃಖವನ್ನೇ ಪರಿಹರಿಸಿಕೊಳ್ಳಲಾರದವನು ಇನ್ನೊಬ್ಬರ ಮನೆಯ ದುಃಖವನ್ನು ನಿವಾರಿಸಲೆಂದು ಬರಿದೆ ಕಣ್ಣೀರು ಕರೆದರೇನು ಪ್ರಯೋಜನ ?!

ವೀರ-ವ್ರತಿ-ಭಕ್ತನೆಂದು [1]ಹೊಗಳಿಸಿಕೊಂಬಿರಿ[1] ಕೇಳಿರಯ್ಯ :
ವೀರನಾದರೆ ವೈರಿಗಳು ಮೆಚ್ಚಬೇಕು !
ವ್ರತಿಯಾದರೆ ಅಂಗನೆಯರು ಮೆಚ್ಚಬೇಕು !
ಭಕ್ತನಾದರೆ ಜಂಗಮ ಮೆಚ್ಚಬೇಕು !
ಈ ನುಡಿಯೊಳಗೆ ತನ್ನ ಬಗೆಯಿರೆ
ಬೇಡಿದ ಪದವಿಯನೀವ ಕೂಡಲಸಂಗಮದೇವ ! 50

ವೀರಾಗ್ರೇಸರ, ಆಜನ್ಮ ಬ್ರಹ್ಮಚಾರಿ, ಭಕ್ತಶಿರೋಮಣಿ ಎಂದು, ಹಿಂತೆಗೆಯದೆ ಮಂದಿಯಿಂದ ಹೊಗಳಿಸಿಕೊಳ್ಳಬಹುದು! ತನ್ನ ಅಹಂಕಾರದ ಕಿಚ್ಚಿಗೆ ವಂದಿ-ಮಾಗಧರ ಎರವಲು ಮಾತಿನ ಉರುವಲನ್ನು ಸುರವಿ, ಧಗಧಗನೆ ಉರಿದು ಮೆರೆಯುವ ಪ್ರಶಸ್ತಿಪರೋಪಜೀವಿಯೇ ಕೇಳು: ನೀನು ವೀರನಾದರೆ ಬತ್ತೀಸಾಯುಧಗಳ ವರಸೆಯಲ್ಲಿ ಬಲ್ಲಿದನಾದ ವೈರಿ ಪರಾಜಿತನಾಗಿ ನಿನ್ನನ್ನು ಜಯ-ಜೀಯ ಎನ್ನಬೇಕು! ನೀನು ಆಜನ್ಮ ಬ್ರಹ್ಮಚಾರಿಯಾದರೆ, ವ್ಯಾಮೋಹಪ್ರಪಂಚಪರಿಣತೆಯಾದ ರೂಪಸಿ ನಿನ್ನನ್ನು ತನ್ನ ತೆಕ್ಕೆಗೊಳಗುಮಾಡಿಕೊಳ್ಳಲರಿಯದೆ ಚರಣದಾಸಿಯಾಗಿ ನಿನ್ನ ಪಾದ ಪೂಜಿಸಬೇಕು ! ನೀನು ಭಕ್ತಿಶಿರೋಮಣಿಯಾದರೆ ಕಾಡಿ ಬೇಡುವ ಜಂಗಮ ತಣಿದು ತಲೆದೂಗಬೇಕು. ಈ ಮಾತಿಗೆ ನೇರವಾಗುವ ನಡೆಯಿದ್ದರೆ—ಬೇಡಿದ ಪದವಿಯ ನ್ನಿತ್ತು ಮೃಡನೊಲಿಯುವನು.

ಆಪ್ಯಾಯನಕ್ಕೆ ನೀಡುವೆ !
ಲಾಂಛನಕ್ಕೆ ಶರಣೆಂಬೆ !
ಲಾಂಛನಕ್ಕೆ ತಕ್ಕ [2]ಆಚಾರವಿಲ್ಲ[2]ದಿದ್ದರೆ
ಕೂಡಲಸಂಗಮದೇವ ನೀ ಸಾಕ್ಷಿಯಾಗಿ ಛೀ ಎಂಬೆ ! 51

ಹಸಿದು ಬಂದ ಜಂಗಮ-ಲಿಂಗ ತೃಪ್ತಿಯಾಗಲೆಂದು ಅನ್ನಸಮಾರಾಧನೆ ಮಾಡುವೆ. ಜಟಾಮಂಡಲ, ತ್ರಿಪುಂಡ್ರ, ನಾಗಕುಂಡಲ, ಕಮಂಡಲ, ಇಷ್ಟಧಾರಣೆ-ಮುಂತಾದ ಶಿವಲಾಂಛನಗಳನ್ನು ಧರಿಸಿ ಬಂದ ಆ ಶರಣಪಾದಾರವಿಂದಕ್ಕೆ ಹೃದಯ ಮಂದಾರವನ್ನು ಸೂಡಿ ಶರಣು ಶರಣೆನ್ನುವೆ. ಆದರೆ ಆ ಲಾಂಛನಕ್ಕೆ ತಕ್ಕ ಆಚರಣೆ ಅವರಲ್ಲಿಲ್ಲದಿದ್ದರೆ ಶಿವನಾಣೆ ಛೀ ಎನ್ನುವೆನೆಂಬ ಬಸವಣ್ಣನವರು ವೇಷಕ್ಕೆ ಮರುಳಾದರೂ, ವೇಷಾನುರೂಪ ಆಚಾರ ಶಿವಭಕ್ತರಲ್ಲಿ ಕಂಡುಬರದಿದ್ದರೆ ಸಿಡಿದು ಕಿಡಿಯಾಗುವರೆಂಬುದು ಅವರ ಸತ್ಯಾಗ್ರಹವನ್ನು ಸೂಚಿಸುವುದು.

---

1 (ಚ) ಹೊಗಳಿಕೊಂಬಿರಿ (ಅನ್ಯತ್ರ)
2 ಆಚರಣೆಯಿಲ್ಲ (ಚ) (ಸ)

ಹಾಲ ನೇಮ, ಹಾಲ ಕೆನೆಯ ನೇಮ !
ಕೆನೆ ತಪ್ಪಿದ ಬಳಿಕ ಕಿಚ್ಚಡಿಯ ನೇಮ !
ಬೆಣ್ಣೆಯ ನೇಮ, ಬೆಲ್ಲದ ನೇಮ !
ಅಂಬಲಿಯ ನೇಮದವರನಾರನೂ ಕಾಣೆ !
ಕೂಡಲ ಸಂಗನ ಶರಣರಲ್ಲಿ
ಅಂಬಲಿಯ ನೇಮದಾತ ಮಾದಾರ ಚೆನ್ನಯ್ಯ ! 52

ವೈಭವಾಂಶಗಳನ್ನು ತೊರೆದು—ಜೀವನವನ್ನು ಸರಳಗೊಳಿಸಿ, ಇಂದ್ರಿಯಗಳ ಉರುವಣೆಯನ್ನು ತಡೆದು—ಅಂತರಂಗ ಜೀವನವನ್ನು ಸಾತ್ವಿಕಗೊಳಿಸಿ, ಲೋಕೋಪಕಾರಿಯಾದ ಚಟುವಟಿಕೆಗಳತ್ತ ತನ್ನ ಮನವನ್ನೂ ಗಮನವನ್ನೂ ಹೆಚ್ಚು ಹರಿಸುವುದಕ್ಕಾಗಿ ಮಹನೀಯರು ಹಾಲು ಬೆಣ್ಣೆಯನ್ನು ಮುಟ್ಟೆ, ಕಿಚ್ಚಡಿ ಬೆಲ್ಲವನ್ನು ಬಿಟ್ಟೆನೆಂಬಂತಹ ಪ್ರತಿಜ್ಞೆ ಮಾಡುವುದುಂಟು. ಈ ವಿಧವಾದ ತ್ಯಾಗಸಂಯಮದ ನಿಲುವು ಪ್ರಶಂಸನಾರ್ಹವೇ ಹೌದು. ಆದರೆ ಕೇವಲ ಪ್ರಶಂಸಾಪ್ರಿಯರಾದ ಡಾಂಭಿಕ ಜನರು ತಾವೂ ಮಹನೀಯರೆನಿಸಿಕೊಳ್ಳುವ ಚಾಪಲ್ಯದಿಂದ ಬಿಟ್ಟೆನೆಂದು ಹೇಳವಲ್ಲಿ—ಕಡಿಮೆ ದರ್ಜೆಯ ವಿಷಯೋಪಭೋಗಗಳನ್ನು ಬಿಟ್ಟು, ಬಿಟ್ಟೆನೆಂಬ ತ್ಯಾಗದ ಮುಸುಕಿನಲ್ಲಿ ವಿಷಯೋಪಭೋಗಗಳನ್ನು ಹೆಚ್ಚು ಸಾರವತ್ತಾಗಿ ಅನುಭವಿಸುವುದೊಂದು ಸೋಜಿಗದ ಸಂಗತಿ ! ಊಟವನ್ನು ಬಿಟ್ಟರುವೆನೆಂದು ಹೇಳಿ, ಹಾಲು—ಬೆಣ್ಣೆ—ಬೆಲ್ಲ ಮುಂತಾದ ರಾಜಭೋಜ್ಯಗಳನ್ನು ಮೋದುವುದು—ಆತ್ಮವಂಚನೆಯಷ್ಟೇ ಅಲ್ಲದೆ ಲೋಕವಂಚನೆಯೂ ಹೌದು ! ಏಕೆಂದರೆ ತಿನ್ನುವತ್ತ ಅವರ ಗಮನ ಹೆಚ್ಚಾಯಿತೇ ಹೊರತು ಉದಾತ್ತಕಾರ್ಯಗಳತ್ತಲಲ್ಲ.

ನಮ್ಮ ಮಾದಾರ ಚೆನ್ನಯ್ಯನಾದರೋ—ವಿಷಯೋಪಭೋಗಗಳತ್ತ ಮನಸ್ಸು ಮಾಡಿದರೆ, ಕಾಯಕಕ್ಕೆ, ಜಂಗಮಸೇವೆಗೆ ಮತ್ತು ಶಿವಪೂಜಾಕಾರ್ಯಕ್ಕೆ ಸಮಯ ಸಾಲದಾಗುವುದೆಂದೂ, ಅನ್ಯವಿಷಯಕ್ಕೆ ಹಣ ಪೋಲಾಗುವುದೆಂದೂ—ಕೇವಲ ಅಂಬಲಿಯನ್ನು ಸೇವಿಸುವ ನೇಮವನ್ನು ಕೈಗೊಂಡನು. ಅಂತಹ ವಿನಮ್ರ ಸರಳ ಜೀವನದ ಉನ್ನತ್ತ ಧ್ಯೇಯದ ಮಹನೀಯನು ಅರ್ಪಿಸಿದ ಅಂಬಲಿಯ ರುಚಿ ನೋಡಿದ ಶಿವನು, ಚೋಳ ಚಕ್ರವರ್ತಿಯು ನಿವೇದಿಸಿದ ರಸಾನ್ನರಸಾಯನಗಳನ್ನು ಒಲ್ಲೆನೆಂದು ಮುಖ ಕಿವುಚಿದನಂತೆ ! ಶಿವನಿಗೆ ಪ್ರಿಯವಾದುದು ಸರಳ ಜೀವನ ಮತ್ತು ಉನ್ನತ ಧ್ಯೇಯ.

ಏನಿ ಬಂದಿರಿ ಹದುಳಿದ್ದಿರೆಂದರೆ
ನಿಮ್ಮ ಮೈಸಿರಿ ಹಾರಿ ಹೋಹುದೇ ?
ಕುಳ್ಳಿರೆಂದರೆ ನೆಲ ಕುಳಿಹೋಹುದೇ ?
ಒಡನೆ ನುಡಿದರೆ ಶಿರ–ಹೊಟ್ಟೆಯೊಡೆವುದೇ ?
ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿದ್ದರೆ
ತಡಗೆಡಹಿ ಮೂಗ ಕೊಯ್ಯದೆ ಮಾಬನೆ
ಕೂಡಲಸಂಗಮದೇವನು ! 53

ಕೊಡಲು ಚೈತನ್ಯವಿಲ್ಲದಿರಬಹುದು ಅಥವಾ ಔದಾರ್ಯವಿಲ್ಲದಿರಬಹುದು. ಆದರೆ ನಮ್ಮಲ್ಲಿ ತಮ್ಮ ಕಷ್ಟಗಳನ್ನು ತೋಡಿಕೊಂಡು ಹೃದಯಭಾರವನ್ನಿಳಿಸಿ ಕೊಳ್ಳಲು ಬಂದ ನೊಂದ ಸಹಜೀವಿಗಳಿಗೆ ಸಹಾನುಭೂತಿಯನ್ನು ಸೂಚಿಸಿ, ಸಂತೈಕೆಯ ಮಾತೊಂದಾಡಲು ಬಂದ ಬರವೇನು ? ಕೊಡಲು ಇಲ್ಲದಿದ್ದರೇನು ? ಕೊಡದಿದ್ದರೇನು ? ಗುಣವಿಲ್ಲದಿದ್ದರೆ ಅಂತಹವನನ್ನು ದೇವರು ಕೆಳಕ್ಕೆ ಕುಕ್ಕಿ, ಕೊರಳು ಮೆಟ್ಟಿ, ಮೂಗನ್ನು ಕೊಯ್ಯದೆ ಬಿಡನು.

ಆದುದರಿಂದ ನಿಮ್ಮ ಮನೆಯವರೆಗೂ ಬಂದವರನ್ನು ಕುರಿತು, ಏನು ಬಂದಿರಿ ಚೆನ್ನಾಗಿರುವಿರಾ ಎನ್ನಿ—ಅಷ್ಟರಿಂದ ನಿಮ್ಮ ಮೈ ಕಂದಿ ಹೋಗುವುದಿಲ್ಲ! ಕುಳಿತು ಕೊಳ್ಳಿರಿ ಎನ್ನಿ : ನಿಮ್ಮ ಮನೆಯು ಅವರು ಕುಳಿತೆಡೆ ಕುಳಿಯಾಗುವುದಿಲ್ಲ! ಬಂದೊಡನೆ ಒಂದು ಒಳ್ಳೆಯ ಮಾತನಾಡಿರಿ, ನಿಮ್ಮ ಶಿರ ಸಿಡಿದು ಹೋಗುವುದಿಲ್ಲ, ಹೊಟ್ಟೆ ಹೊಡೆದು ಹೋಗವುದಿಲ್ಲ. ಸತ್ಕಾರ ಸೌಜನ್ಯದ ಗುಣವಿಲ್ಲದಿದ್ದರೆ ಶಿವನು ನಿಮ್ಮನ್ನು ಸರ್ವನಾಶ ಮಾಡುವನು. ಏಳಿ ಎಚ್ಚರಗೊಳ್ಳಿ.

ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತ !
ಮೃದುವಚನವೇ ಸಕಲ ಜಪಂಗಳಯ್ಯ !
ಮೃದುವಚನವೇ ಸಕಲ ತಪಂಗಳಯ್ಯ !
ಸದುವಿನಯವೇ ಸದಾಶಿವನೊಲುಮೆಯಯ್ಯ !
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ ! 54

ಭಕ್ತನಿಗೆ ಮೊತ್ತಮೊದಲ ಮತ್ತು ಕಟ್ಟಕಡೆಯ ವಿಶಿಷ್ಟಗುಣವೆಂದರೆ ಸೌಜನ್ಯ! ಅವನು ಕಂಡ ಸಜ್ಜನರಿಗೆ ಶರಣೆನ್ನಬೇಕು ! ವಿನಯ ಬೇಕು, ಒಳ್ಳೆಯ ಮಾತು ಬೇಕು !! ಅದಕ್ಕಿಂತಲೂ ಒಳ್ಳೆಯ ಜಪತಪಗಳಿಲ್ಲ. ಅವಿಲ್ಲದೆ ಕೇವಲ ಜಪತಪಗಳೆಲ್ಲ ವ್ಯರ್ಥ ; ಮೂಗು ಮುಚ್ಚಿ, ಕಣ್ಣು ಕೆಂಚಗಾದರೆ ಎಂದೆಂದಿಗೂ ಶಿವನೊಲಿಯುದಿಲ್ಲ.

ನುಡಿದರೆ ಮುತ್ತಿನ ಹಾರದಂತಿರಬೇಕು !
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು !
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು !
ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು !
ನುಡಿಯೊಳಗಾಗಿ ನಡೆಯದಿದ್ದರೆ
ಕೂಡಲಸಂಗಮದೇವನೆಂತೊಲಿವನಯ್ಯ ?! 55

ಆಣಿ ಮುತ್ತಿನ ಹಾರವನ್ನು ನೋಡಿರುವಿರಾ ? ಅದೆಷ್ಟು ಓರಣವಾಗಿ, ಸ್ಥಾನೋಚಿತವಾಗಿ ಜೋಡಣೆಯಾಗಿ, ಹೊಳಪಾಗಿ, ಕಂಡವರ ಕಣ್ಮಣಿಯಾಗಿರುವುದು! ಹಾಗಿರಬೇಕು ನಾವಾಡುವ ಮಾತು, ಸಮಯೋಚಿತವಾಗಿ, ನಯವಾಗಿ, ಒಪ್ಪವಾಗಿ, ಆತ್ಮರಸಿಕರು ಒಪ್ಪುವ ಹಾಗೆ ! ನಮ್ಮ ಮಾತು ಮಾಣಿಕ್ಯದಂತೆ ನಮ್ಮ ಅಂತರಂಗದ ಅಸುರಾಗದ ಮೆರುಗನ್ನು ಹತ್ತಾರು ಕಡೆ ಎಸಳೆಸಳಾಗಿ ಹೊರಹೊಮ್ಮಿಸುತ್ತಿರಬೇಕು. ಅದು ಶುದ್ಧಸ್ಫಟಿಕದ ಶಲಾಕೆಯಂತೆ ಕೊಂಕಿಲ್ಲದೆ, ಕಳಂಕದ ಸೋಂಕಿಲ್ಲದೆ ನೇರವಾಗಿ ಹೃದಯಸ್ಪರ್ಶಿಯಾಗಿರಬೇಕು. ಮೇಲಾಗಿ, ಮಾತನಾಡಿದರೆ ಮಹಾದೇವನು ಮೆಚ್ಚಿ ತಲೆದೂಗುವಂತಿರಬೇಕು. ಎಚ್ಚರಿಕೆ ! ಮಾತು ಮಾಟವಾಗದೆ ಹೋದರೆ ದೇವರೊಲಿಯುವುದಿಲ್ಲ !!

ಹಾಲತೊರೆಗೆ ಬೆಲ್ಲದ ಕೆಸರು
ಸಕ್ಕರೆಯ ಮಳಲು, ತವರಾಜದ ನೊರೆತೆರೆಯಂತೆ
ಆದ್ಯರ ವಚನವಿರಲು ;
ಬೇರೆ ಭಾವಿಯ ತೋಡಿ
ಉಪ್ಪು ನೀರುಂಬವನ ವಿಧಿಯಂತೆ ಆಯಿತ್ತೆನ್ನ ಮತಿ
ಕೂಡಲಸಂಗಮದೇವ.

ಊರ ದಂಡೆಯಲ್ಲೇ ತಿಳಿನೀರಿನ ತೊರೆ ಹರಿಯುತ್ತಿದ್ದರೂ—ಯಾವನಾದ ರೊಬ್ಬನು ತನ್ನ ಮನೆಯಲ್ಲಿ ಒಂದು ಭಾವಿಯನ್ನು ತೋಡಿ ಬಂದ ಉಪ್ಪುನೀರನ್ನೇ—ನನ್ನ ಭಾವಿಯದೆಂದೋ, ತೊರೆ ದೂರವೆಂದೋ—ಕುಡಿಯುತ್ತಿದ್ದರೆ ಅವನು ಮೂರ್ಖ. ಬರೀ ನೀರಿನ ತೊರೆಯನ್ನು ತೊರೆದವನೇ ಇಷ್ಟು ಶೋಚನೀಯನಾದರೆ—ಬಳಿಯಲ್ಲೇ ಹಾಲಿನ ಹೊಳೆ ಹರಿಯುತ್ತಿದ್ದು, ಅದರ ಮರಳೆಲ್ಲಾ ಸಕ್ಕರೆಯಾಗಿ, ನೊರೆ ತೆರೆಯೆಲ್ಲ ತವರಾಜವೆಂಬ ಸ್ವಾದು ದ್ರವ್ಯವಾಗಿ, ಅದರ ಪಾನೀಯವು ಮಧುರಾತಿಮಧುರವಾಗಿರುವಾಗ, ಅದನ್ನು ಬಿಟ್ಟು, ಭಾವಿಯನ್ನು ತೋಡಿ, ಉಪ್ಪುನೀರನ್ನು ಕುಡಿಯುವನಾದರೋ ಹತಭಾಗ್ಯ ಶತಮೂರ್ಖ ! ಭವತಾರಿಣಿಯಾಗಿ, ಸರ್ವಜನಾದರಣೀಯವಾಗಿ, ಮನೆ ಮನೆಯ ಮುಂದೆ (ಮನೆ ಮಾತಾಗಿ), ಪುರಾತನಶಿವಶರಣರ ವಚನಸುಧಾಪ್ರವಾಹ ಹರಿಯುತ್ತಿರುವಾಗ—ಬಸವಣ್ಣನವರು ತಾವು ಬೇರೆ ವಚನಗಳನ್ನು ರಚಿಸುತ್ತಿರುವುದು ವ್ಯರ್ಥಶ್ರಮವೆಂದೂ, ಮೇಲಾಗಿ, ಆ ತಮ್ಮ ವಚನಗಳು ನೀರಸವೆಂದೂ, ಅವುಗಳ ರಚನೆಯಲ್ಲಿ ತೊಡಗಿ, ಪುರಾತನಶರಣರ ವಚನ—ಸಾಹಿತ್ಯ ಸುಧೆಯನ್ನು ಮತ್ತೆ ಮತ್ತೆ ಸವಿಯುವ ಸುಯೋಗವನ್ನು ಕಳೆದುಕೊಂಡಿರುವುದಾಗಿಯೂ ಹೇಳಿ ತಮ್ಮ ವಿನಯವನ್ನೇ ಮೆರೆದಿರುವರು.

ವಾಸ್ತವಾಂಶವೆಂದರೆ—ಶರಣರ ವಚನಸಾಹಿತ್ಯಸಾಗರದಾಳದ ಬೆಲೆ ಬಾಳುವ ಮುತ್ತುಗಳಂತಿವೆ ಬಸವಣ್ಣನವರ ವಚನಗಳು.

ಆದ್ಯರ ವಚನ ಪರುಷ ಕಂಡಣ್ಣ !
ಸದಾಶಿವನೆಂಬ ಲಿಂಗವ ನೆರೆ ನಂಬುವುದು
ನಂಬಲೊಡನೆ ನೀ [1] [ವಿಜಯಿ] [1] ಕಂಡಣ್ಣ !
ಅಧರಕ್ಕೆ ಕಹಿ ! ಉದರಕ್ಕೆ ಸಿಹಿ !!
ಕೂಡಲ ಸಂಗನ ಶರಣರ ವಚನ ಬೇವ ಸವಿದಂತೆ ! 57

ಮುಟ್ಟಿದ ಕಚ್ಚಾಲೋಹವನ್ನೂ ಅಚ್ಚ ಭಂಗಾರವಾಗಿಸುವ ಅದ್ಭುತಶಕ್ತಿಯ ಸ್ಪರ್ಶಮಣಿ—ಶರಣರ ತಾರಕಶಕ್ತಿಯ ವಚನವಾಣಿ! ಅದು ನಿನ್ನ ಕಿವಿಗೆ ಬಿದ್ದರೆ ಸಾಕು ನೀನು ಸರ್ವಾಂಗ ಶುದ್ಧವಾಗುವೆ. ಆ ವಾಣಿ ನಿನ್ನ ಕಿವಿಗೆ ಕಟುವಾಗಿರ ಬಹುದು, ತಲೆ ಕೊಡವಬೇಡ, ಅದು ಆತ್ಮಕ್ಕಂತೂ ಪುಟಪಾಕ—ಬಾಯಿಗೆ ಕಹಿ ಯಾದ ಬೇವು ಆಯುರಾರೋಗ್ಯ ನಿರ್ವಾಹಿಯಾಗಿರುವ ಹಾಗೆ !

ಹಾವು ತಿಂದವರ ನುಡಿಸ ಬಹುದು
ಗರ ಹೊಡೆದವರ ನುಡಿಸ ಬಹುದು !
ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯ !
ಬಡತನವೆಂಬ ಮಂತ್ರವಾದಿ ಹೊಗಲು
ಒಡನೆ ನುಡಿವರಯ್ಯ ಕೂಡಲ ಸಂಗಮದೇವ ! 58

ಹಾವು ಕಚ್ಚಿರುವುದಿಲ್ಲ, ದೆವ್ವ ಹಿಡಿದಿರುವುದಿಲ್ಲ. ಆದರೂ ಧನಿಕರು ವಿಷವೇರಿದವರಂತೆ ಸೆಟೆದಿರುವರು, ದೈವಮೇಲೆ ಬಂದವರಂತೆ ವಿಕಾರವಾಗಿರುವರು. ಆಶ್ಚರ್ಯವೇನು ? ಧನಮದವೆಂಬುದು ಹಾವಿನ ವಿಷಕ್ಕಿಂತ ಘೋರ, ಭೂತ ಚೇಷ್ಟೆಗಿಂತ ಭಯಂಕರ ! ಏಕೆಂದರೆ ಹಾವು ಕಚ್ಚಿದವರನ್ನು ಸಮೀಪಿಸಿ, ಮಂತ್ರಿಸಿ, ಏನಪ್ಪ ಹೇಗಿರುವೆಯೆಂದು ಮಾತನಾಡಿಸಬಹುದು ; ಭೂತ ಹಿಡಿದವರನ್ನೂ ಅಷ್ಟೇ ! ಆದರೆ ಸಿರಿಯ ಸೊಕ್ಕೇರಿದವರನ್ನು ಸಮೀಪಿಸಲೇ ಸಾಧ್ಯವಿಲ್ಲ—ಮಾತನಾಡಿಸುವು ದಿನ್ನೆಲ್ಲಿ? ಅವರು ಜಂತ್ರಮಂತ್ರಗಳಿಗೂ ಮೀರಿದ ಉತ್ಕ್ರಮಣಾವಸ್ಥೆಯಲ್ಲಿರುವರು. ಬಡತನವೆಂಬ ಮಂತ್ರವಾದಿ ಅವರ ಮನೆಯ ಹೊಸಲಿಗೆ ಕಾಲಿಟ್ಟರೆ ಮಾತ್ರ ಕಣ್ ತೆರೆಯುವರು. ಸರಕ್ಕನೆ ಅಪ್ಪ, ಅಣ್ಣ ಎಂದು ಎಲ್ಲರೊಡನೆ ಮಾತನಾಡುವರು, ಕೈಕಾಲು ಸಡಿಲವಾಗುವುದು, ಮುಖದ ಗಂಟು ಬಿಚ್ಚುವುದು !

---

[1] ವಿಜಯ (ಸರ್ವತ್ರ)

ಒಲೆ ಹತ್ತಿ ಉರಿದರೆ ನಿಲಬಹುದಲ್ಲದೆ
[1]ನೆಲ' ಹತ್ತಿ ಉರಿದರೆ ನಿಲಬಾರದು !
ಏರಿ ನೀರುಂಬೊಡೆ, ಬೇಲಿ [2][ಕೈಯ][2] ಮೇವೊಡೆ
ನಾರಿ ತನ್ನ ಮನೆಯಲ್ಲಿ ಕಳುವೊಡೆ
ತಾಯ ಮೊಲೆವಾಲು ನಂಜಾಗಿ ಕೊಲುವೊಡೆ ಇನ್ನಾರಿಗೆ ದೂರುವೆ ?!
[3]ತಂದೆ ಕೂಡಲ ಸಂಗಮದೇವ,
ನೀ ಹುಟ್ಟಿಸಿ ಜೀವನ ಭವದುಃಖಿಯ ಮಾಡಿದ ಬಳಿಕ
ಬಿಡಿಸುವರಾರುಂಟು ? 59

ಸರ್ವವ್ಯಾಪಕನೂ, ಸರ್ವಾಧಾರನೂ, ಸರ್ವಸಂರಕ್ಷಕನೂ, ಸರ್ವಾಧ್ಯಕ್ಷನೂ, ಸರ್ವೋತ್ಪತ್ತಿಮೂಲಸ್ವರೂಪನೂ ಆದ ಶಿವನು ತನ್ನ ಅಭಯಹಸ್ತವನ್ನು ಜೀವರ ನೆತ್ತಿಯ ಮೇಲಿಟ್ಟು ವರದನಾಗುವವರೆಗೆ ಆ ಜೀವರಿಗೆ ಭವರಾಟಾಳದ ಬವಣೆ ತಪ್ಪುವುದಿಲ್ಲ, ಜೀವನ್ಮುಕ್ತಿ ಲಭಿಸುವುದಿಲ್ಲ—ಎಂಬುದನ್ನು ಬಸವಣ್ಣನವರು ಕ್ರಮವಾಗಿ ಈ ಮುಂದಣ ಐದು ನಿದರ್ಶನಗಳೊಡನೆ ಸಮರ್ಥಿಸುವರು :

ಒಲೆ ಹತ್ತಿ ಉರಿದರೆ ಕೆಲಕ್ಕೆ ಸರಿದು ನಿಲ್ಲಬಹುದು ; ನೆಲವೇ ಹತ್ತಿ ಉರಿದರೆ ಸರಿದು ನಿಲ್ಲುವುದಿನ್ನೆಲ್ಲಿ ? ಕೆರೆಯ ನೀರನ್ನು ನಿಲ್ಲಿಸಿರುವ ಏರಿಯೇ ಆ ನೀರನ್ನೆಲ್ಲಾ ಹೀರಿದರೆ ಆ ನೀರನ್ನುಳಿಸುವುದಿನ್ನೆಂತು ? ತುಡುಗು ದನಗಳ ಬಾಯಿಂದ ಕಾಯ ಬೇಕಾದ ಬೇಲಿಯೇ ಆವರಿಸಿ ಬಂದು, ಹೊಲವನ್ನು ಮೇದರೆ, ಬೆಳೆಯು ಪಾಡೇನು ? ಗೃಹಲಕ್ಷ್ಮಿಯಾದ ಗೃಹಿಣಿಯೇ ಮನೆಯಲ್ಲಿರುವುದನ್ನು ಕದಿಯುವುದಾದರೆ ಮನೆಯ ಸಂಪತ್ತನ್ನು ಸಂರಕ್ಷಿಸುವರಾರು ? ತಾಯ ಮೊಲೆಹಾಲೇ ನಂಜಾಗಿ ಕಂದನನ್ನು ಕೊಲ್ಲುವುದಾದರೆ ಆ ಕಂದನು ಬೆಳೆದು ಬಾಳುವ ಬಗೆಯೆಂತು—ಎಂದು.

ಈ ವಚನದ ಮೊದಲಿಗೆ ಬಂದಿರುವ ಒಲೆ ಮತ್ತು ನೆಲದ ನಿದರ್ಶನದಿಂದ ಧ್ವನಿತವಾಗುವ ಬಸವಣ್ಣನವರ ಮತ್ತೊಂದು ಸಂದೇಶವೇನೆಂದರೆ—ಸಾಧಕನಾದವನು ಹೆದರ ಬೇಕಾದುದು ಜಗತ್ತಿನ ಉರುವಣೆಗಲ್ಲ, ಸರ್ವಾಂತರ್ಯಾಮಿಯಾದ ಪರಮಾತ್ಮನ ಆಗ್ರಹಕ್ಕೆ—ಎಂದು.

---

[1](ಪಾ) ಧರೆ (ಅನ್ಯತ್ರ)

[2]ಕೆಯ (ಸರ್ವತ್ರ). ಕೆಯ್ ಎಂದರೆ ಹಳಗನ್ನಡದಲ್ಲಿ ಹೊಲ ಎಂದರ್ಥ. ಅದರ ದ್ವಿತೀಯಾವಿಭಕ್ತಿಯ ರೂಪವೇ "ಕೆಯ್ಯ" (ಅಥವಾ 'ಕೆಯ್ಯ') ಎಂಬುದು. ಅಪಾರ್ಥವಾದೀತೆಂದು ಶಂಕಿಸಿ 'ಕೈಯ' ಎಂಬ ರೂಪವನ್ನು ಬಳಸಿದೆ.

[3](ಲಿ) ಕೂಡಲ ಸಂಗಮದೇವ (ಅನ್ಯತ್ರ)

ಹಾಲೆಂಜಲು ¹ ಪೇಯುನ!
ಉದಕವೆಂಜಲು ಮತ್ಸ್ಯದ!
ಪುಷ್ಪವೆಂಜಲು ತುಂಬಿಯ!
ಎಂತು ಪೂಜಿಸುವೆ ? ಶಿವ ಶಿವಾ ಎಂತು ಪೂಜಿಸುವೆ ! ?
ಈ ಎಂಜಲವನತಿಗಳೆವಡೆ ಎನ್ನಳವಲ್ಲ
ಬಂದುದ ಕೈಕೋ ಕೂಡಲಸಂಗನುದೇವ !

60

ಜನ ಕಾಮದ ಅಮಲಿನಲ್ಲಿ ವೇಶ್ಯೆಯ ಎಂಜಲ ತಂಬುಲವನ್ನು ತಿನ್ನುವರು. ನಾಲಗೆಯ ಚಾಪಲ್ಯದಲ್ಲಿ ನಾಯ ಎಂಜಲಾದ ಬೇಟೆಯ ಮೃಗವನ್ನು ತಿನ್ನುವರು. ಆದರೆ ಜಂಗಮಪ್ರಸಾದವನ್ನು ಲಿಂಗಕ್ಕರ್ಪಿಸಿ ಕೊಂಬ ಸಂಪ್ರದಾಯುವನ್ನು ಎಂಜಲೆಂದು ಅಲ್ಲಗಳೆಯುವರು—ಎಂದು ಬಸವಣ್ಣನವರು ತಮ್ಮ ಒಂದು ವಚನದಲ್ಲಿ ಕಟುವಾಗಿ ಟೀಕಿಸಿರುವರು.

ಈ ಟೀಕೆಯ ಹಿನ್ನೆಲೆಯಲ್ಲಿ ಈ ವಚನದ ಭಾವವನ್ನು ಮನಗಾಣಬೇಕು.

ಎಂಜಲೆಂದು ಹೊರಟರೆ ದೇವರಿಗರ್ಚಿಸಿ ನಿವೇದಿಸಲೇನೂ ದೊರೆಯದು ! ಲಿಂಗದ ಮಜ್ಜನಕ್ಕೆರೆಯುವ ನೀರು ಮೀನೆಂಜಲು, ಅದರ ತಲೆಗೇರಿಸುವ ಹೂವು ದುಂಬಿಯೆಂಜಲು, ಅರ್ಪಿಸುವ ಹಾಲು ಕರುವಿನೆಂಜಲು ! ಮತ್ತೆ ಪೂಜಿಸುವ ಬಗೆ ಹೇಗೆ ? ಬಗೆಬಗೆಯ ಬಣ್ಣದ ಸುಂದರ ಪುಷ್ಪಗಳನ್ನೇರಿಸಿ ಕಣ್ಣಾರೆ ನೋಡದಿದ್ದರೆ ಮನ ನಿಲ್ಲದು, ಹಾಲನ್ನರ್ಪಿಸದಿದ್ದರೆ ಜೀವ ತಣಿಯದು—ಎಲೆ ದೇವರೆ, ನನ್ನ ಅರ್ಚನೆ ಅರ್ಪಣೆಗಳಲ್ಲಿ ಏನು ಕುಂದು ಕೊರತೆಯಿದ್ದರೂ ಅದನ್ನು ನಾನು ಕಳೆಯಲಾರೆ—ಭಕ್ತಿಯಿಂದ ಕೊಟ್ಟುದನ್ನು ನೀನು ಕೈಕೊಂಡು ಕಾಪಾಡೆಂದು ಬಸವಣ್ಣನವರು ಪ್ರಾರ್ಥಿಸುತ್ತಿದ್ದಾರೆ.



---

¹ ವತ್ಸನ (ಪಳ)

ಮಾರಿ–ಮಸಣಿಯೆಂಬಿವು ಬೇರಿಲ್ಲ ಕಾಣಿರೋ !
[1] ಮಾರಿಯೆಂಬುದೇನು ?
ಕಂಗಳು ತಪ್ಪಿ ನೋಡಿದರೆ ಮಾರಿ !
ನಾಲಗೆ ತಪ್ಪಿ ನುಡಿದರೆ ಮಾರಿ !
ನಮ್ಮ ಕೂಡಲ [2]ಸಂಗಯ್ಯನ ನೆನಹ ಮರೆದರೆ ಮಾರಿ ! 61

ಮಾರಿ–ಮಸಣಿಯೆಂದರೆ ಹೆದರುವರು. ಅವಳ ಕಡೆಯಿಂದೊದಗುವ ಸಾವನ್ನು ನೆನೆಸು ತತ್ತರಿಸಿ ಕುರಿಕೋಳಿಗಳನ್ನು ಬಲಿಕೊಟ್ಟು ಬಾಯ್ಗೆಟ್ಟು ಬೇಡಿಕೊಳ್ಳುವರು. ಬರುವ ಕುತ್ತಿನಿಂದ ಪಾರಾಗುವ ದಾರಿಯಿದಲ್ಲ. ಮಾರಿಯೆಂಬುವಳೇನು ಕೇವಲ ಊರಿನ ಹೊರಗಿರುವಳೇನು ? ಆ ಮಾರಿ ನಮ್ಮ ಮೈಮನಸ್ಸುಗಳಲ್ಲಿರುವಳು ! ತಪ್ಪಿ ನೋಡುತ್ತಿರುವ ಕಣ್ಣಲ್ಲಿ ಕಿಡಿ ಕಾರುತ್ತಿರುವಳು. ತಪ್ಪು ನುಡಿಯುತ್ತಿರುವ ನಾಲಗೆಯಲ್ಲಿ ವಿಕಟಾಟ್ಟಹಾಸ ಮಾಡುತ್ತಿರುವಳು. ದೇವರ ಧ್ಯಾನವನ್ನು ಮರೆತಿರುವರ ಮನಸ್ಸಿನಲ್ಲಿ ಮನೆ ಮಾಡಿರುವಳು !

ಶೀಲವನ್ನು ಸಂಪಾದಿಸದೆ, ಸತ್ಯವನ್ನು ನುಡಿಯದೆ, ದೇವರ ಧ್ಯಾನವನ್ನು ಮಾಡದೆ ಹಾಳಾಗಿ, ಪರರು ನನ್ನನ್ನು ಕೊಂದರೆನ್ನಬೇಡ. ನಿನ್ನ ಕಣ್ಣು–ಮನ–ನಾಲಗೆಯೇ ನಿನ್ನನ್ನು ಕೊಲ್ಲುವ ಕ್ರೂರಮಾರಿಗಳು, ಅವನ್ನು ಸಾತ್ವಿಕಗೊಳಿಸಿಕೋ!

ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯ !
ಇವ ನಮ್ಮವ, ಇವ ನಮ್ಮವ, ಇವ ನಮ್ಮವನೆಂದೆನಿಸಯ್ಯ !
ಕೂಡಲ ಸಂಗಮದೇವ, ನಿಮ್ಮ ಮನೆಯ ಮಗನೆಂದೆನಿಸಯ್ಯ ! 62

ಸಜ್ಜನರಿಂದ ಬಾಹಿರನಾಗಿ ಬದುಕುವ ಕೀಳುಬಾಳು ನನಗೆ ಬೇಡ. ಶಿಷ್ಟಜನಗೋಷ್ಠಿಯ ಕಣ್ಣಿಗೆ ನಾನು ಬಿದ್ದಾಗ; "ಇವನು ಯಾರೋ ! ನಮ್ಮವನಲ್ಲ ; ಈ ಹೀನವಾದ ನಡೆನುಡಿಯವನು ನಮ್ಮವನು ಹೇಗಾದಾನು ?" ಎನಿಸಿಕೊಳ್ಳುವಂತಹ ನಿಕೃಷ್ಟ ರೀತಿನೀತಿಗಳು ನನಗೆ ಬೇಡ ! ಅದಕ್ಕೆ ಬದಲಾಗಿ "ಇವನು ನಮ್ಮವ ತಮ್ಮವ" ನೆಂದು ಸಜ್ಜನರು ಮಮಕರಿಸಿ ಮಾತನಾಡಿಕೊಳ್ಳುವಂತಹ ಹಸನಾದ ಬಾಳನ್ನು ನಡೆಸಬೇಕೆಂಬುದೇ ನನ್ನಿಚ್ಛೆ.

ದೇವರೇ, ನನ್ನನ್ನು ಕಂಡ ಜನ "ಇವನು ದೇವರ ಮಗ, ಶಿವನ ಸತ್ಪುತ್ರ" ನೆಂಬಂತೆ ಉದ್ಧರಿಸಿ, ತಿದ್ದಿ ರೂಪಿಸು !

---

[1] X (ಚ). [2]ಸಂಗನ ಶರಣರ ನೆನೆಹು ತಪ್ಪಿದರೆ (ಚ)

ಕಾಗೆಯೊಂದಗುಳ ಕಂಡರೆ !
ಕರೆಯದೇ ತನ್ನ ಬಳಗವೆಲ್ಲವ ?
ಕೋಳಿಯೊಂದು ಕುಟುಕ ಕಂಡರೆ !
[1]ಕೂಗಿ' ಕರೆಯದೇ ತನ್ನ ಕುಲವೆಲ್ಲವ ?
ಶಿವ ಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ
[2]ಆ ಕಾಗೆ ಕೋಳಿಯಿಂದ ಕರಕಷ್ಟ !
ಕೂಡಲಸಂಗಮದೇವ !

63

ಸಮಾಜಜೀವಿಯೆನಿಸಿಕೊಂಡ ನೀನು–ಕೂಡಿ ಬಾಳುವ, ಹಂಚಿ ತಿನ್ನುವ ಸಹಜ ಪ್ರವೃತ್ತಿಯನ್ನು ಕಳೆದುಕೊಂಡು–ಕಾಗೆ ಕೋಳಿಗಳಿಗಿಂತ ಕೀಳಾಗಿ ವರ್ತಿಸ ಬೇಡ. ಎಲ್ಲಾದರೂ ಚೆಲ್ಲಿದ ಅಗುಳನ್ನು ಕಂಡರೆ ಕಾಗೆ ತನ್ನ ಬಳಗವನ್ನೆಲ್ಲಾ ಕಾ ಕಾ ಎಂದು ಕರೆದು ಜೊತೆಗೂಡಿ ತಿನ್ನುವುದು ! ಕೋಳಿಯಾದರೂ ಅಷ್ಟೆ; ಕುಟುಕು ಸಿಕ್ಕಿದರೆ ತನ್ನ ಮರಿಮಂದಿಯನ್ನೆಲ್ಲಾ ಕರೆದು ಒಡಗೂಡಿ ತಿನ್ನುವುದು ! ದೈವಭಕ್ತನಾದ ನಿನಗೆ ಉಳಿದ ದೈವಭಕ್ತರೆಲ್ಲ ಬಂಧುಬಳಗವಲ್ಲವೆ? ಅವರ ಕುಲ ನಿನ್ನ ಕುಲ ಒಂದಲ್ಲವೆ? ಎಲ್ಲಾ ಶಿವನ ಕುಲವಲ್ಲವೆ ? ನೀನು ಆರ್ಜಿಸಿದುದನ್ನು ನಿನ್ನ ಸಹಜೀವಿಗಳೊಡನೆ ಹಂಚಿ ತಿನ್ನು.

[1](ಸ) (ಜ)
[2](ನಿ)

ತನುವ ನೋಯಿಸಿ, ಮನವ ಬಳಲಿಸಿ
ನಿಮ್ಮಪಾದವಿಡಿದವರೊಳರೆ ?
ಈ ನುಡಿ ಸುಡದಿಹುದೇ ?!
ಕೂಡಲಸಂಗಮದೇವ,
ಶಿವಭಕ್ತರ ನೋವೇ ಅದು ಲಿಂಗದ ನೋವು ! ! 64

ಅನ್ನ ನಿದ್ರೆಗಳಿಲ್ಲದೆ ದೇಹವನ್ನೂ ಮನಸ್ಸನ್ನೂ ಕರಗಿಸಿ, ಕೊರಗಿಸಿ, ಅವನ್ನು ನಿಶ್ಶಕ್ತಗೊಳಿಸುವುದು ಅನ್ಯಾಯ ಅಧರ್ಮ! ಅಷ್ಟರಿಂದ ದೈವಸಾಕ್ಷಾತ್ಕಾರ ಮಾಡಿಕೊಂಡವರುಂಟೆ? ಆ ಮಾತು ಅವಾಚ್ಯ ಅಮಂಗಳ! ಮನಸ್ಸು ಸಾತ್ವಿಕ ಮಹತ್ವಾಕಾಂಕ್ಷೆಗಳಿಂದ ಉತ್ಸುಕವಾಗಿರಬೇಕು. ಮನಸ್ಸಿನ ಆ ಮಹತ್ವಾಕಾಂಕ್ಷೆಗಳನ್ನು .ಕಾರ್ಯರೂಪಕ್ಕಿಳಿಸುವಷ್ಟು ದೃಢವಾಗಿರಬೇಕು—ಈ ದೇಹ! ಇಂತಹ ದೇಹ–ಮನಸ್ಸುಗಳೆರಡರ ಬಲವೇ ದೇವರೊಲವು! ನಿಶ್ಶಕ್ತಿಯಿಂದ ಶಿವಸಾಕ್ಷಾತ್ಕಾರವೆಂದಿಗೂ ಸಾಧ್ಯವಲ್ಲ. ಮೇಲಾಗಿ ಶಿವನನ್ನು ಒಲಿಸುವೆನೆಂದು ಶಿವಭಕ್ತ ನೊಂದರೆ, ಅದರಿಂದ ಶಿವನಿಗೆ ಕ್ಲೇಶವಾದೀತೇ ಹೊರತು, ಸಂತೋಷವೆಂದಿಗೂ ಆಗುವುದಿಲ್ಲ.

ಎರಡನೆಯದಾಗಿ— ಶಿವನಿಗೊಂದು ಪ್ರತ್ಯೇಕವಾದ ದೇಹವಿಲ್ಲ, ಅವನು ಭಕ್ತದೇಹಿ! ಶಿವನಿಗೊಂದು ಪ್ರತ್ಯೇಕವಾದ ಮನಸ್ಸಿಲ್ಲ, ಅವನು ಭಕ್ತಮಾನಸಿ! ಆದುದರಿಂದಲೇ ಭಕ್ತನು ಸಾಕ್ಷಾತ್ ಶಿವಸ್ವರೂಪಿ. ಅವನು ನೋಯಬಾರದು, ಅವನನ್ನು ನೋಯಿಸಲೂ ಬಾರದು.

ಕುದುರೆ–ಸತ್ತಿಗೆಯವರ ಕಂಡರೆ
ಹೊರಳಿ ಬಿಪ್ದು ಕಾಲ ಹಿಡಿವರು!
ಬಡ ಭಕ್ತರು ಬಂದರೆ
ಎಡೆಯಿಲ್ಲ ಅತ್ತ ಸನ್ನಿ ಎಂಬರು!
ಎನ್ನೊಡೆಯ ಕೂಡಲ ಸಂಗಯ್ಯನವರ
ತಡೆಗೆಡಹಿ ಮೂಗ ಕೊಯ್ಯದೆ ಮಾಬನೆ? 65

ಕುದುರೆಯ ಮೇಲೆ ಕುಳಿತು, ಸತ್ತಿಗೆ ಹಿಡಿಸಿಕೊಂಡು ಮೆರೆಯುವ ರಾಜಗುರುಗಳನ್ನು ಕಂಡರೆ ಸಾಕು, ಜನ ಓಡಿಹೋಗಿ, ಹುಡಿಯಲ್ಲಿ ಹೊರಳಿ, ಅವರ ಕಾಲು ಹಿಡಿದು, ಪಾದಪೂಜೆಗೆ ಕರೆಯುವರು! ಆದರೆ ಯಾವನಾದರೊಬ್ಬ ಬಡಜಂಗಮನು ದಿಕ್ಕುತಪ್ಪಿ, ಒಂದು ಹೊತ್ತಿನ ಅನ್ನ ವಸತಿಗಾಗಿ ತನ್ನ ಮನೆಯ ಬಾಗಿಲಿಗೆ ಬಂದು ಬೇಡಿದರೆ, ಕಡೆಗಣ್ಣೆತ್ತಿಯೂ ನೋಡದೆ, "ಮುಂದಕ್ಕೆ ಹೋಗಿ" ಎನ್ನುವರು!! ಐಶ್ವರ್ಯದ ಅಡಿಕಡ್ಡಿಯಲ್ಲಿ ಲೌಕಿಕ ವ್ಯಕ್ತಿಯ ಸ್ಥಾನಮಾನವನ್ನು ಅಳೆದು, ಇವನು ಧನಿಕ, ಇವನು ನಿರ್ಧನಿಕನೆಂದು ನಿರ್ಧರಿಸಿ ಧನಿಕನನ್ನು ಪುರಸ್ಕರಿಸುವುದು ನಿರ್ಧನಿಕನನ್ನು ತಿರಸ್ಕರಿಸುವುದು ಅನ್ಯಾಯವಾದರೂ ಅರ್ಥವಾಗುವ ಮಾತು, ಆದರೆ ಆಧ್ಯಾತ್ಮಿಕಸಿದ್ಧಿಗಳಿಂದಲೇ ಮಾನ್ಯರೂ, ಪೂಜ್ಯರೂ ಎನಿಸಬೇಕಾದ ಗುರುವರ್ಗದವರನ್ನೂ ಐಶ್ವರ್ಯದ ತಕ್ಕಡಿಯಲ್ಲೇ ತೂಗುವುದಾದರೆ—ಆ ಆಧ್ಯಾತ್ಮಿಕ ಮೌಲ್ಯಗಳಿಗೇ ಅತ್ಯಂತ ಅಪಚಾರವೆಸಗಿದಂತಾಗುವುದು. ಅದು ಧರ್ಮದ್ರೋಹ! ಅಂತಹವರಿಗೆ ದೈವಕೃಪೆಯಾಗುವುದಿಲ್ಲ.

ಕೋಪಿ ಮಜ್ಜನಕ್ಕೆರೆದರೆ ರಕ್ತದ ಧಾರೆ!
ಪಾಪಿ ಹೂವನೇರಿಸಿದರೆ ಮಸೆದಡಾಯುಧದ ಗಾಯ!
ಕೂಪವರನಾರನೂ ಕಾಣೆನು ಮಾದಾರಚೆನ್ನಯ್ಯನಲ್ಲದೆ!
ಕೂಪವರನಾರನೂ ಕಾಣೆನು ಡೋಹರ ಕಕ್ಕಯ್ಯನಲ್ಲದೆ!
'[ವ್ಯಾಪತ್ತಿ]' ಯುಳ್ಳವ ನಮ್ಮ ಮಡಿವಾಳ ಮಾಚಯ್ಯ!
ನಿನ್ನ ಪತ್ತಿಗರಿವರಯ್ಯ ಕೂಡಲ ಸಂಗಯ್ಯ! 66

ಪೂಜಿಸುವವನ ಮನದಲ್ಲಿ ಶಿವನ ಮೇಲೆ ಸಹಜವಾದ ಪ್ರೇಮವಿರಬೇಕು. ಅದಿಲ್ಲದೆ ಎರೆದ ಅಭಿಷೇಕ, ರಕ್ತಸೇಕ! ಏರಿಸಿದ ಹೂವು ಕತ್ತರಿಸಿದ ಘಾಯ! ಭಕ್ತಿರತಿಯಿಂದ ಮಾಡಿದುದಾದರೋ— ಕಣ್ಣಪ್ಪನ ಪೂಜೆಯಂತೆ ರಕ್ತಮಾಂಸ ಗಳಿಂದಾದರೂ— ಗಂಗಾಜಲ–ಪರಿಮಳಪುಷ್ಪಗಳಿಂದ ಮಾಡಿದ ಪೂಜೆಯಂತೆ ಶಿವನಿಗೆ ಪ್ರಿಯವಾಗುವುದು. ಅಂತಹ ಪ್ರೇಮದಿಂದ ಮತ್ತು ಉತ್ಕಟ ಪ್ರೇಮಾವೇಶದಿಂದ ಶಿವನನ್ನು ಪೂಜಿಸಿದ ಆದರ್ಶಮಹನೀಯರೆಂದರೆ ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ ಮತ್ತು ಮಡಿವಾಳ ಮಾಚಯ್ಯಗಳು. ಅವರ ಪೂಜಾವಿಧಾನದಲ್ಲಿ ಕೋಪವಿರಲಿಲ್ಲ— ಸತ್ಯಾಗ್ರಹವಿತ್ತು; ಪಾಪವಿರಲಿಲ್ಲ— ದುಷ್ಟಶಿಕ್ಷಕವೀರಾವೇಶವಿತ್ತು. ಆ ಗುಣಗಳೇ ನಿಜವಾದ ಪೂಜೆ. ಅವರೇ ಶಿವನ ನಿಜವಾದ ಬಂಧುಗಳು.

[1]ವ್ಯಾಪತಿ (ಚ) (ಸಿ) (ಕ) ವ್ಯಾಪ್ತಿ (ಪ) (ಸ)

ಮಾಡಿದೆನೆಂಬುದು ಮನದಲ್ಲಿ ಹೊಳೆದಕೆ
ಏಡಿಸಿ ಕಾಡಿತ್ತು ಶಿವನ ಡಂಗುರ !
ಮಾಡಿದೆನೆನ್ನದಿರಾ ಲಿಂಗಕ್ಕೆ !
ಮಾಡಿದೆನೆನ್ನದಿರಾ ಜಂಗಮಕ್ಕೆ !
ಮಾಡಿದೆನೆಂಬುದು ಮನದಲಿಲ್ಲದಿದ್ದರೆ
ಬೇಡಿತ್ತನೀವ ನಮ್ಮ ಕೂಡಲಸಂಗಮದೇವ ! 67

ಕಳ್ಳನು ಮಾಡಬಾರದುದನ್ನು ಮಾಡಿ ಮುಚ್ಚಿಕೊಳ್ಳುತ್ತಾನೆ. ಸಭ್ಯನೆಂಬವನು ಮಾಡಬೇಕಾದುದನ್ನು ಮಾಡಿ ಕೊಚ್ಚಿಕೊಳ್ಳುತ್ತಾನೆ. ಕಳ್ಳನು ಮುಚ್ಚಿಕೊಳ್ಳುವುದು ಸರಿಯೇ: ಅದು ಮಾಡಬಾರದುದು! ಸಭ್ಯನು ಕೊಚ್ಚಿಕೊಳುವುದಂತೂ ಅಕ್ಷಮ್ಯ. ಏಕೆಂದರೆ ಅವನು ತನ್ನ ಕರ್ತವ್ಯವನ್ನು ಮಾತ್ರ ಮಾಡಿ ಮುಗಿಸಿದ್ದಾನೆ. ಅದಕ್ಕೇಕೆ ಬಡಾಯಿ? ಸಭ್ಯನ ಆ ಬಡಾಯಿಯಲ್ಲಿ—ತನಗಿಂತ ಅನ್ಯನಾದವನು ಬಡಪಾಯಿ, ಅವನಿಂದ ಆಗದುದನ್ನು ನಾನು ಮಾಡಿರುವೆನೆಂಬ ಅನ್ಯಾಪಮಾನಕಾರಕ ಮಿಥ್ಯಾಂಶ ಹುದುಗಿದೆ. ಕಳ್ಳನ ಮುಚ್ಚುವಿಕೆಯಲ್ಲಾದರೋ, ತಾನು ಮಾಡಿರುವುದು ಅನ್ಯಾಯ. ಅಶ್ಲೀಲ, ಅದನ್ನು ಕೇಳಿ ಜನ ಖತಿಗೊಂಡಾರು ಎಂಬ ದೈನ್ಯಭೀತಿ ಯಿದೆ. ಈ ದೃಷ್ಟಿಯಿಂದ ತನ್ನ ಕರ್ತವ್ಯವಾದ ಧರ್ಮಕಾರ್ಯಗಳನ್ನು ಮಾಡಿದ ಸಭ್ಯನು ಹಮ್ಮಿನಿಂದ ವರ್ತಿಸಿದರೆ, ಅವನು ಕಳ್ಳನಿಗಿಂತ ಹೆಚ್ಚು ಅಪರಾಧಿ.

ಈ ತೂಕದ ಪ್ರಕಾರ, ಕಡಿಮೆ ಅಪರಾಧ ಮಾಡಿದವನೆಂಬ ಕಳ್ಳನನ್ನೂ ಶಿಕ್ಷಿಸದೆ ರಾಜನು ಬಿಡುವುದಿಲ್ಲ. ಅವನನ್ನು ಶೂಲಕ್ಕೇರಿಸುವಂತೆ ಆಜ್ಞಾಪಿಸುವನು. ತಲೆ ಹೊಯ್ಕರು ಡಂಗುರಹೊಯ್ದು ಬೀದಿಬೀದಿಯಲ್ಲಿ ಅವನನ್ನು ಮೆರೆಸಿ, ವಧ್ಯಸ್ಥಾನಕ್ಕೆ ಕರೆದೊಯ್ಯುವರು. ಅಂದಮೇಲೆ—ಪ್ರಟಕನಕಾಮಿಯಾಗಿ ಮಹಾಪರಾಧಿಯಾದ ಆ ಸಭ್ಯಂಮನ್ಯನನ್ನು ರಾಜ-ರಾಜನಾದ ಶಿವನು ಬಿಟ್ಟಾನೆ! ಕಳ್ಳನನ್ನು ಶಿಕ್ಷಿಸಲು ರಾಜನಿಗೆ ಹೊರಗಣ ರಜುವಾತು ಬೇಕು. ಅದು ಒದಗದೇ ಕಳ್ಳನೊಬ್ಬ ಶಿಕ್ಷೆಯಿಂದ ತಪ್ಪಿಸಿಕೊಳ್ಳಬಹುದು. ಆದರೆ ಭಕ್ತನಾದವನ ಕೀರ್ತಿಕಾಮಾಪರಾಧವು ಪ್ರಚ್ಛನ್ನ ನಾಗಿದ್ದರೂ, ಅದನ್ನು ಅಂತರ್ಯಾಮಿಯಾದ ಶಿವನು ಅರಿತು, ಅದಕ್ಕೆ ಸರಿತೂಗುವ ಶಿಕ್ಷೆಯನ್ನು ಕೊಟ್ಟೇ ತೀರುವನು. ಮರೆಯಬೇಕೆಂದವನನ್ನು ಇನ್ನೂ ಹೆಚ್ಚಾಗಿ ಮೆರೆಸಿ ಮುರಿಯುವನು.

ಮಾಡಿದೆನೆಂಬುದು ಮನದಲ್ಲಿ ಹೊಳೆದುದಕ್ಕೆವನ ಈ ಪ್ರತಿಕ್ರಿಯೆ ಕಾಣುವಂತೆ ಕಟುವಾದುದೇನೂ ಅಲ್ಲ. ಮೊದಲನೆಯದಾಗಿ—ಅನುಕೂಲ ವಾತಾ-ವರಣವಿಲ್ಲದಾಗಲೂ ಕರ್ತವ್ಯ ಪರಿಪಾಲನೆ ಅಪರಿಹಾರ್ಯ! ಎರಡನೆಯದಾಗಿ ಕರ್ತವ್ಯವನ್ನು ಪಾಲಿಸಿದವನು, ಅದನ್ನು ಕೊಚ್ಚಿಕೊಳ್ಳುವುದರಲ್ಲಿ, ಇತರರ ಕಾಲವನ್ನು

ಅಪಹರಿಸುವುದು ಕಳ್ಳತನವಲ್ಲದೆ ಅದಕ್ಕಿಂತ ಕಡಿಮೆಯೇನೂ ಅಲ್ಲ. ಜೊತೆಗೆ ಅವನು ಸ್ವಪ್ರಶಂಸೆಯಲ್ಲಿ ತೊಡಗಿದಷ್ಟು ಕಾಲವೂ ಕರ್ತವ್ಯಭ್ರಷ್ಟನಾಗಿರುವನು. ಇದು ಪ್ರಕಟವಾಗಿ ತನ್ನನ್ನು ತಾನೇ ಹೊಗಳಿ ಕೊಳ್ಳುವವನಿಗೆ ಅನ್ವಯಿಸುವ ಮಾತು. ಹಾಗಲ್ಲದೆ, ಪ್ರಶಂಸಾಲಾಲಸೆಯನ್ನು ಮನಸ್ಸಿನಲೇ ಇಟ್ಟುಕೊಂಡಿರು ವವನು, ಅದನ್ನು ಇನ್ನೊಬ್ಬರ ಬಾಯಿಂದ ಹೇಳಿಸುವ ಬಲಾತ್ಕಾರದ ಪರಿಸ್ಥಿತಿಗೆ ಕಾರಣಕರ್ತನಾಗುವನು. ಭಕ್ತನು ಈ ಕೌಟಿಲ್ಯಜಟಿಲ ತಂತ್ರದಲ್ಲಿ ಮಗ್ನನಾದ ನೆಂದರೆ ಕರ್ತವ್ಯಗಳಿಗೆ ಅವನು ತಿಲಾಂಜಲಿಯಿತ್ತಂತೆಯೇ !

ಶಿವನಿಗೆ ಪ್ರಿಯವಾದುದು ನಿರಹಂಕಾರ ಮತ್ತು ನಿರಾಡಂಬರ. ಅವಿಲ್ಲ ದಿದ್ದರೆ ಉಗ್ರಕೋಪ; ಪರಿಣಾಮ—ದುರ್ಗತಿ. ಆದುದರಿಂದ ಲಿಂಗಕ್ಕೆ, ಜಂಗಮ ಲಿಂಗಸ್ವರೂಪಿಯಾದ ಜಂಗಮನಿಗೆ ಮಾಡಿದೆನೆಂದು ಕೊಚ್ಚಿಕೊಳ್ಳಬೇಡಿ. ನಾವು ಅವರಿಗೆ ಮಾಡುವ ಸತ್ಕಾರಕ್ಕಿಂತ, ಅವರು ನಮಗೆ ಮಾಡಲವಕಾಶಕೊಟ್ಟ ಕೃಪೆ ದೊಡ್ಡದು. ಸ್ವಾಮಿಗಾಗಿ ಸೇವಕನು ದುಡಿದು ವಿನಮ್ರನಾಗಿರುವನೇ ಹೊರತು— ತಾನು ಮಾಡಿದ್ದೆಲ್ಲ ಉಪಕಾರವೆಂಬಂತೆ ಉದ್ವೃತ್ತನಾಗಿರುವುದಿಲ್ಲ. ಅದು ಅವನ ಕರ್ತವ್ಯವೆಂಬುದೇ ಅವನ ಭಾವನೆ. ಈ ಸೇವಾಮನೋಧರ್ಮವಿದ್ದರೆ ಮಾತ್ರ ಶಿವ ನೊಲಿಯುವನೆಂಬುದೇ ಬಸವಣ್ಣನವರ ಅಭಿಪ್ರಾಯ.

ಆದುದರಿಂದಲೇ ಮಾಡುವ ಕರ್ಮ—ಕೀರ್ತಿಕಾಮದಿಂದ ಕಳಂಕಿತವಾಗಿರ ಬಾರದು, ಅದು ಶಿವಾರ್ಪಣಭಾವಬದ್ಧವಾಗಿರಬೇಕು.

ಕಾಲಲಿ ಕಟ್ಟಿದ ಗುಂಡು !
ಕೊರಳಲಿ ಕಟ್ಟಿದ ಬೆಂಡು !
ತೇಲಲೀಯದು ಗುಂಡು !!
ಮುಳುಗಲೀಯದು ಬೆಂಡು !
ಇಂತಪ್ಪ ಸಂಸಾರ ಶರಧಿಯ ದಾಂಟಿಸಿ
ಕಾಲಾಂತಕನೇ ಕಾಯೋ ಕೂಡಲಸಂಗಯ್ಯ ! 68

ಶಿವದೀಕ್ಷೆ ಪಡೆದು, ಲಿಂಗವನ್ನು ಕೊರಳಲ್ಲಿ ಕಟ್ಟಿದ ಬಸವಣ್ಣನವರಿಗೆ ಅದರಿಂದ ಸಂಸಾರಸಾಗರವನ್ನು ಈಸಬಹುದೆಂಬ ಧೈರ್ಯವಿದೆ. ಆದರೆ, ಸಂಸಾರವ್ಯಾಮೋಹ—ವ್ಯವಹಾರದ ಭಾರ ಅವರನ್ನು ತಾವು ನಿರೀಕ್ಷಿಸಿದಷ್ಟು ಊರ್ಧ್ವಗಾಮಿಯಾಗಲು ಬಿಡದೆ ಅಧೋಗಾಮಿಯಾಗಿ ಅದುಮುವ ಕೆಲವು ವಿಷನಿಮಿಷಗಳಲ್ಲಿ ಅವರ ಧೈರ್ಯ ಕಲಕಿ ಹೋಗಿ, ಕೊರಳಲ್ಲಿ ಕಟ್ಟಿದ ಲಿಂಗ ಬೆಂಡಿನಂತೆ ತಾರಕವಾದರೂ, ಸಂಸಾರವು ಗುಂಡಿನಂತೆ ಭಾರವಾಗಿ ತಮ್ಮ ಆಧ್ಯಾತ್ಮಿಕ ಚಲನವಲನಕ್ಕೆ ಆತಂಕಕಾರಿಯೆನಿಸಿತು. ಈ ವಿಷಮಪರಿಸ್ಥಿತಿಯಲ್ಲಿ ಬಸವಣ್ಣನವರು ಅತೀತಶಕ್ತಿಯನ್ನು ಆಹ್ವಾನಿಸಿ ದೇವರಿಗೆ ಮೊರೆಯಿಟ್ಟಿರುವರು :

ಬರಿಯ ಬೆಂಡು ಕಟ್ಟಿಕೊಂಡು ನೀರಿಗಿಳಿದವನು ಸುರಕ್ಷಿತ ! ಸ್ವಪ್ರಯತ್ನದಿಂದ ಅವನು ಕಡಲನ್ನಾದರೂ ದಾಟುವುದು ಸಾಧ್ಯವಿದೆ. ಬರಿಯ ಗುಂಡನ್ನು ಕಟ್ಟಿಕೊಂಡವನು ತದ್ವಿರುದ್ಧ ! ಮುಳುಗುವುದು ಖಚಿತ ! ಆದರೆ ಕೊರಳಲ್ಲಿ ಬೆಂಡುಕಟ್ಟಿ ಕಾಲಲ್ಲಿ ಗುಂಡುಕಟ್ಟಿ ನೀರಿಗಿಳಿದವನಾದರೋ ಗುಂಡಿರುವುದರಿಂದ ತೇಲದೆ, ಬೆಂಡಿರುವುದರಿಂದ ಮುಳುಗದೆ; ಬದುಕದೆ, ಮರಣ ಹೊಂದದೆ ; ಬದುಕಿನ ಮಿಡುಕಿಲ್ಲದೆ, ಮರಣದ ಸ್ತಬ್ಧತೆಯಿಲ್ಲದೆ, ಜೀವನ್ಮೃತಕನಾಗಿ, ತಾನೂ ಚಿಂತಾಮನಸ್ಕನಾಗಿ ನೋಡಿದವರಿಗೂ ಚಿಂತಾಜನಕನಾಗಿರುವನು. ಶಿವದೀಕ್ಷೆ ತೊಟ್ಟು ಲಿಂಗವನ್ನು ಕೊರಳಿಗೆ ಕಟ್ಟಿ ಈ ಸಂಸಾರಶರಧಿಯನ್ನು ದಾಂಟುವೆನೆಂದ ಬಸವಣ್ಣನವರಿಗೆ ನಿರಂಕುಶರಾಜರ ರಾಜಕೀಯ ಪದವಿ ಹೀಗೆ ಕಾಲಿಗೆ ಗುಂಡಿನಂತೆ ತೊಡರಿತು. ಅತ್ತ ದೈವ ಇತ್ತ ದೆವ್ವ—ಎರಡನ್ನೂ ಆರಾಧಿಸುವುದೆಂತು ? ಅರೆಕ್ಷಣ ಅಧಿಕಾರತಾಮಸದ ಆಳಕ್ಕಿಳಿಯುವುದು, ಮರುಕ್ಷಣ ಶಿವಧ್ಯಾನದ ಶೃಂಗಕ್ಕೇರುವುದು, ಏರುವಾಗ ತಾಮಸದ ಭಾರ, ಇಳಿಯುವಾಗ ಧ್ಯಾನದ ವಿವಶತೆ. ಹೀಗಾಗಿ ಬಸವಣ್ಣನವರ ಜೀವನದ ಆಧ್ಯಾತ್ಮಿಕ ಮತ್ತು ಲೌಕಿಕವೆಂಬ ಎರಡೂ ಮಾರ್ಗದಲ್ಲಿ ಪ್ರಗತಿಯು ತಾತ್ಕಾಲಿಕವಾಗಿ ಕುಂಠಿತವಾಯಿತು. ಆಗ ಅವರು ದೇವರಿಗೆ ಮೊರೆಯಿಟ್ಟುದು—ಪಾರುಮಾಡೆಂದು.

ಮಾಡಿ ನೀಡಿ ಲಿಂಗವ ಪೂಜಿಸಿಹೆನೆಂಬವರು
ನೀವೆಲ್ಲ ಕೇಳಿರಣ್ಣ :
ಹಾಗದ ಕೆರಹ ಹೊರಗೆ ಕಳೆದು
ದೇಗುಲಕ್ಕೆ ಹೋಗಿ ದೇವರಿಗೆ[1] ನಮಸ್ಕಾರವ ಮಾಡುವನಂತೆ
ತನ್ನ ಕೆರಹಿನ ಧ್ಯಾನವಲ್ಲದೆ, ದೇವರ ಧ್ಯಾನವಿಲ್ಲ ;
ಧನವನಿರಿಸದಿರಾ !
ಇರಿಸಿದರೆ ಭವ [2]ತಪ್ಪದು[2] ತಪ್ಪದು !
ಕೂಡಲಸಂಗನ ಶರಣರಿಗೆ [3]ಸವೆಸಲೇ[3] ಬೇಕು 69

ಧರ್ಮಕಾರ್ಯಗಳನ್ನು ಮಾಡಿ, ದಾನ ನೀಡಿ, ಲಿಂಗಪೂಜೆಯನ್ನು ಮಾಡುತ್ತಿರುವೆವೆಂಬ ಕೆಲವು ವಂಚಕಜನ—ತೋರಿಕೆಗಾಗಿ ಅಲ್ಪ-ಸ್ವಲ್ಪ ದಾನಮಾಡಿ, ಎಲ್ಲವನ್ನೂ ಲೋಕಸೇವೆಗಾಗಿ ವ್ಯಯಮಾಡಿದೆವೆನ್ನುತ್ತ, ತಮ್ಮ ಅಪಾರ ಐಶ್ವರ್ಯವನ್ನೆಲ್ಲ ಯಾರೂ ಕಾಣದಂತೆ ಹೂತಿಟ್ಟಿರುವುದನ್ನು ಕುರಿತು ಬಸವಣ್ಣನವರು ಕಟಕಿಯಾಡುತ್ತಿರುವರು :

ಒಂದು ಒರೆಯಷ್ಟು ಹೊನ್ನನ್ನಾಗಲಿ, ಒಂದು ಎಳೆಯಷ್ಟು ಬಟ್ಟೆಯನ್ನಾಗಲಿ, ಇಂದಿಗೆ ನಾಳೆಗೆಂದು, ತನಗೆಂದು ತನ್ನ ಹೆಂಡತಿ-ಮಕ್ಕಳಿಗೆಂದು ಇಡದ ನಿಸ್ವಾರ್ಥ ಜೀವನದ ಬಸವಣ್ಣನವರಿಗೆ ಧನಪಿಶಾಚಪ್ರವೃತ್ತಿ ರುಚಿಸದು. ಅದಕ್ಕೆ ಕಾರಣ : ಕೂಡಿಟ್ಟ ಹಣದ ಕಡೆಗೇ ಗಮನ ಹರಿಯುವುದೇ ಹೊರತು, ದೇವರ ಧ್ಯಾನ ಮತ್ತು ಧರ್ಮದ ಕಡೆಗಲ್ಲ! ಪಾದರಕ್ಷೆಯಂತಹ ಅಗ್ಗದ ವಸ್ತುವನ್ನು ಹೊರಗೆ ಬಿಟ್ಟು, ದೇವರ ದರ್ಶನಕ್ಕೆಂದು ದೇವಾಲಯ ಪ್ರವೇಶಿಸಿದವನ ಮನವೆಲ್ಲ ತನ್ನ ಪಾದರಕ್ಷೆ ಏನಾಯಿತೋ, ಯಾರು ಒಯ್ದರೋ ಎಂಬತ್ತ ತುಯ್ಯುತ್ತಿರುವುದು. ಅಂಥವನಿಗೆ ಇನ್ನು ದೇವರ ಧ್ಯಾನವೆಲ್ಲಿ ಬಂತು ? ಹಾಗೆಯೇ ಅಲ್ಪ ಐಶ್ವರ್ಯದ ಕಡೆ ಮನಸ್ಸಿಟ್ಟು, ಅನಲ್ಪ-ಶಿವಸುಖವನ್ನು ಕಳೆದುಕೊಳ್ಳುವುದು ಬೇಡವೆನ್ನುವರು ಅಣ್ಣನವರು.

ಕೂಡಿಟ್ಟ ಹಣ ನಿರರ್ಥಕವಾಗಿ ಒಂದೆಡೆ ಇರುವುದಲ್ಲದೆ, ಅದರಿಂದ ಮಾನವನ ಮಾನಸಿಕ ಸ್ವಾಸ್ಥ್ಯವೂ ಮಾಯವಾಗುವುದು. ಇದಕ್ಕೆ ಪರಿಹಾರವೆಂದರೆ—ಐಶ್ವರ್ಯವನ್ನೆಲ್ಲಾ ಲೋಕಸೇವೆಗೆ ಸವೆಸುವುದೊಂದೇ. ಅದೇ ಅಣ್ಣನವರ ಅಮರಸಂದೇಶ.

---

[1] (ಸ) × (ಅನ್ಯತ್ರ)
[2] (ಕ) ಬಪ್ಪುದು (ಹಳ) (ಸ) × (ಚ)
[3] ಒಡನೆ ಸವೆಸಲೆ (ಚ) ಸವಿಸಲೆ (ಹಳ) (ಸ) ಸವೆಸಲಿ (ಅನ್ಯತ್ರ)

ಹುತ್ತವ [1]ಬಡಿದರೆ ಹಾವು ಸಾವುದೇ[1]ಅಯ್ಯ ?
ಅಘೋರ ತಪವ ಮಾಡಿದರೇನು ?
ಅಂತರಂಗ– ಆತ್ಮಶುದ್ಧಿಯಿಲ್ಲದವರನೆಂತು
ನಂಬುವನಯ್ಯ ಕೂಡಲಸಂಗಮದೇವ ? !

70

ನಮ್ಮ ದೇಹವೊಂದು ಹುತ್ತ, ಮನೋವಿಕಾರ ಅದರೊಳಗಿರುವೊಂದು ಹಾವು, ನಾವು ಹಾವಾಡಿಗರು. ಹಾವಾಡಿಗನಿಗೆ ಲಾಭವಾಗುವುದು—ಹಾವನ್ನು ಹಿಡಿದು, ಅದರ ವಿಷದ ಹಲ್ಲನ್ನು ಕಿತ್ತು, ಅದನ್ನು ಆಡಿಸುವುದರಿಂದಲೇ ಹೊರತು—ಸಾಯಿಸುವುದರಿಂದಲಲ್ಲ. ಮನಸ್ಸಿನ ವಿಕಾರವನ್ನು ಕಳೆದು, ಅದನ್ನು ಸತ್ಯಶುದ್ಧ ಕಾಯಕಕ್ಕಾಗಿ ಮೇಳವಿಸಿಕೊಳ್ಳಬೇಕೆನ್ನುವುದೇ ಎಲ್ಲ ವಿಧವಾದ ಸಂದೇಶ–ಸಾಧನೆಗಳ ಪರಮೋದ್ದೇಶ , ವಿಷವನ್ನು ಕಳೆದ ಮೇಲೆ ಹಾವಿನೊಡತಣ ಸಂಗವೇ ಲೇಸೆಂಬ ಮಹಾದೇವಿಯಕ್ಕನವರ ಸೂಕ್ತಿಯ ಸಾರವೂ ಅದೇ. ಆದರೆ ಕೆಲವರು ಮನಸ್ಸನ್ನು ನಾಶಪಡಿಸುವೆನೆಂದು ತಪ್ಪಾಗಿ ತೀರ್ಮಾನಿಸಿ, ಕೇವಲ ದೇಹ–ದಂಡನೆಯಿಂದ ಅದನ್ನು ಸಾಧಿಸುವೆವೆಂದು ಮತ್ತಷ್ಟು ತಪ್ಪು ದಾರಿಯನ್ನು ಹಿಡಿಯುವರು. ಮೂಗು ಮುಚ್ಚಿ ಉಸಿರು ಕಟ್ಟಿ, ಬಟ್ಟೆ ಬಿಚ್ಚಿ, ಹೊಟ್ಟೆ ಕಟ್ಟಿ, ಲೋಕಕ್ಕೆ ಬೆನ್ನು ತಿರುಗಿಸಿ—ಆ ಜನರು, ಘೋರತಪಸ್ಸನ್ನು ಮಾಡುವೆವೆಂದು ವ್ಯರ್ಥ ದೇಹದಂಡನೆಯಲ್ಲಿ ದಣಿಯುತ್ತಿರುವರು. ಅದರಿಂದ ಸ್ವಾಂತಕ್ಕಾಗಲಿ ಲೋಕಾಂತಕ್ಕಾಗಲಿ ತಣಿವಿಲ್ಲ.

ನಮ್ಮ ಬಹಿರಂಗವು ಸೂತ್ರವಾದರೆ, ಅಂತರಂಗವು ಆ ಸೂತ್ರದ ಗೊಂಬೆ. ಬಹಿರಂಗದಸೂತ್ರವನ್ನು ತುಡುಕಿದಲ್ಲದೆ ಅಂತರಂಗದ ಗೊಂಬೆ ಹಿಡಿತಕ್ಕೆ ಬರದೆಂಬುದೇನೋ ನಿಜ. ಆದರೆ ತುಡುಕುವಲ್ಲಿ ತಾಳ ಮೇಳಬೇಕು. ಇಲ್ಲದೇ : ಹೋದರೆ ಅದು ಬೇತಾಳವಾಗಿ ಕುಣಿಯುವುದು. ಸೂತ್ರಧಾರನ ಮನೋಗತವದಲ್ಲ. ಪ್ರೇಕ್ಷಕನ ಅಭಿಮತವೂ ಅದಲ್ಲ.

ಅಂತರಂಗವು ನಿಷ್ಕಾಮ–ಧ್ಯಾನಪ್ರಣಾಳಿಕೆಯಿಂದ ಹೊರಹೊಮ್ಮಿ, ಅಭಂಗ ಗಭೀರವಾಗಿ, ನಿಸ್ತರಂಗ ಪ್ರಸನ್ನವಾಗಿ, ಉದಾತ್ತಕಾರ್ಯಗಳ ಪೂರ್ವರಂಗವಾಗಿ ಇರಬೇಕು. ಅದರ ಆಶೆ ಆಕಾಂಕ್ಷೆಗಳು ಅಧೋಗಾಮಿಯಾಗಿರದೆ, ಸ್ವಂತಹಿತ–ಸೀಮಿತವಾಗಿರದೆ, ಲೋಕಹಿತದಲ್ಲಿ ಆತ್ಮಹಿತವನ್ನು ಕಾಣುವಂತಹ ನಿಸ್ಸೀಮವಾದ ಹಾಸುಬೀಸುಗಳಲ್ಲಿ ಹಾಸುಹೊಕ್ಕಾಗಿರಬೇಕು. ಇದನ್ನೇ " ಆತ್ಮಶುದ್ಧಿ "ಯೆಂದು ಬಸವಣ್ಣನವರು ನಿರ್ದೇಶಿಸಿರುವುದು. ಇದಿಲ್ಲದೆ ಕೇವಲ ದೇಹದಂಡನೆ ವ್ಯರ್ಥವೆಂದೇ ಅವರು ಹೇಳಿರುವುದು.

---

[1] ಬಡಿದಡುರಗ ಸಾವುದೆ (ಪಸು)

ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ !
[1]ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ[1] !
ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ !
ಛಲಬೇಕು ಶರಣಂಗೆ [2]ಲಿಂಗ-ಜಂಗಮುವನೊಂದೆಂಬ[2] !
ಛಲಬೇಕು ಶರಣಂಗೆ [3]ಪ್ರಸಾದದಿಂದ ಪರವಿಲ್ಲವೆಂಬ[3] !
[4]ಛಲವಿಲ್ಲದವರ ಮೆಚ್ಚ[4] ಕೂಡಲಸಂಗಮದೇವ ! 71

ಲೌಕಿಕ ಜೀವನದಲ್ಲಿಯೇ ಉಚ್ಚಾಸ್ಥಿತಿಗೆ ಬರುವೆನೆಂಬವನಿಗೆ ಛಲವಿಲ್ಲದಿದ್ದರೆ ಸಾಧ್ಯವಿಲ್ಲ. ಈ ಮಾತು ಆಧ್ಯಾತ್ಮಿಕ ಜೀವನದಲ್ಲಿ ಪ್ರಗತಿಯನ್ನು ಸಾಧಿಸುವೆನೆಂಬವನಿಗೆ ಮತ್ತೂ ಹೆಚ್ಚಾಗಿ ಅನ್ವಯಿಸುವುದು. ಏಕೆಂದರೆ ಅವನು ಏರಬೇಕಾದ ಎತ್ತರ ದೊಡ್ಡದು ! ಅದು ಕಡು ಕಡಿದು ! ಜಾರಿದರೆ, ಬೀಳುವ ಅಧಃಪಾತ ದೊಡ್ಡದು, ಅದು ಅತಳಪ್ರಪಾತ. ಆದುದರಿಂದ ಅವನು ಗುರಿಮುಟ್ಟಬೇಕಾದರೆ ಜಾರೆನೆಂಬ ನಿಷೇಧಾತ್ಮಕ ಛಲಬೇಕು. ಏರುವೆನೆಂಬ ವಿಧೇಯಾತ್ಮಕ ಛಲಾನ್ವಿತ ಬಲಬೇಕು. ನಿಷೇಧಾತ್ಮಕವಾಗಿ ಪರಧನವನ್ನು ಪರಸತಿಯನ್ನು, ಮಾರಿ ಮಸಣಿ ಮುಂತಾದ ಕುಬ್ಜಕಲ್ಪನಾಪ್ರತೀಕವಾದ ಪರದೈವಗಳನ್ನು ಒಲ್ಲೆನೆಂಬ ಛಲಬೇಕು ; ಜೊತೆಗೆ, ಲಿಂಗದಂತೆಯೇ ಜಂಗಮುಲಿಂಗವೆನಿಸಿದ ಜೀವಕೋಟಿಯೂ ಪವಿತ್ರವೂ ಪೂಜ್ಯವೂ ಸೇವ್ಯವೂ ಆದುದೆಂಬ ವಿಧೇಯಾತ್ಮಕ ಭಾವದೆಚ್ಚರಿಕೆ ಬೇಕು. ಜೀವಕೋಟಿಯ ಸುಖಸಂತೋಷವೇ ತನಗೆ ಪ್ರಸಾದವೆಂಬ ಅರ್ಪಣದ ಅನುವರಿತಿರಬೇಕು. ಹಾಗಿಲ್ಲದಿದ್ದರೆ ಶಿವನು ಮೆಚ್ಚುವುದಿಲ್ಲ.

---

[1]×(ಲಿ)
[2](ಲಿ) ಲಿಂಗ ಜಂಗಮ ಒಂದೆಂಬ (ಅನ್ಯತ್ರ)
[3](ಲಿ) ಪ್ರಸಾದ ದಿಟವೆಂಬ (ಅನ್ಯತ್ರ)
[4]ಛಲಬೇಕು ಶರಣಂಗೆ ಪರಸ್ತ್ರೀಯರ ಮುಟ್ಟೆನೆಂಬ :
ಛಲವಿಲ್ಲದವನ ಮೆಚ್ಚ (ಲಿ)

ವ್ಯಾಧನೊಂದು ಮೊಲನ ತಂದರೆ
ಸಲುವ ಹಾಗಕ್ಕೆ [1]ಬಿಲಿವರಯ್ಯ[1] !
[2]ನೆಲನಾಳ್ದನ[2]ಹೆಣನೆಂದರೆ
ಒಂದಡಕೆಗೆ ಕೊಂಬವರಿಲ್ಲ ನೋಡಯ್ಯ !
ಮೊಲನಿಂದ ಕರಕಷ್ಟ ನರನ ಬಾಳುವೆ
ಸಲೆ ನಂಬೋ ಕೂಡಲಸಂಗಮದೇವನ !

72

ಭೋಗ-ಯೋಗಸಮನ್ವಯವಿಲ್ಲದೆ, ಕೇವಲ ಭೋಗದ ಕಡೆಗೇ ತನು-ಮನ-ಧನ ತೆತ್ತು, ಅಪರೂಪವಾದ ಮಾನವಜನ್ಮ ಅರ್ಥಶೂನ್ಯವಾಗುವುದು ಶ್ರೇಯಸ್ಕರವಲ್ಲ. ಧನವನ್ನೆಲ್ಲ ಸೂರೆಗೊಟ್ಟು, ಮನವನ್ನೆಲ್ಲ ಮಾರುಗೊಟ್ಟು, ಮೆರೆಸಿದ ಈ ಮೃಣ್ಮಯ ದೇಹಕ್ಕೆ—ಚಿನ್ಮಯನು ತೊಲಗಿದನೆಂದರೆ—ತೃಣಮಾತ್ರವೂ ಬೆಲೆಯಿಲ್ಲ. ಬೇಡನು ತೂಗಿ ತಂದ ಕಾಡುಮೃಗವಾದ ಮೊಲದ ಮೃತದೇಹಕ್ಕೆ ಹಾಗಕಾಸಿನ ಬೆಲೆಯಾದರೂ ಉಂಟು. ಭೂಮಂಡಲವನ್ನಾಳಿದ ಭೂಪತಿಯ ಹೆಣವೆಂದರೆ ಅದನ್ನು ಯಾರೊಬ್ಬರೂ ಒಂದು ಗೋಟಡಕೆಗೂ ಕೊಳ್ಳುವುದಿಲ್ಲ ! ಸಾವಿನ ಜೊತೆಯಲ್ಲೇ ಮಾನವನ ಮಹಿಮೆಯೆಲ್ಲ ಹೀಗೆ ಮಾಯವಾಗುವುದಾದರೆ ಅವನು ನಡೆಸಿದ ಜೀವನವೆಲ್ಲ ವನ್ಯಮೃಗಜೀವನಕ್ಕಿಂತ ಕೀಳಾಯಿತು ! ಹಾಗಾಗುವುದು ಬೇಡ. ಬದುಕುವಾಗ ಭೋಗ-ಯೋಗಗಳನ್ನು ಹದಬೆದೆಯರಿತು ಬೆರೆಸಿ ಬದುಕು. ಅಂತಹ ಸಮರಸ ಅಮೃತಜೀವನಕ್ಕೆ " ಮರಣ ಮಹಾನವಮಿ "ಯೆನಿಸುವುದು.

---

1 ಬೆಲಿಸರಯ್ಯ (ಸಿ)
2 (ಸ) ನೆಲಸಾಳ್ವನ (ಅನ್ಯತ್ರ)

ತನ್ನಾಶ್ರಯದ ರತಿಸುಖವನು
ತಾನುಂಬ ಊಟವನು
ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ ?
ತನ್ನ ಲಿಂಗಕ್ಕೆ ಮಾಡುವ ನಿತ್ಯ ನೇಮುವನು
ತಾ ಮಾಡಬೇಕಲ್ಲದೇ
ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ ? !
[1] ಸಾಕ್ಷಿ :
ಸ್ತ್ರೀ ಸಂಗಂ ಪರಹಸ್ತಂ ಚ ಪರವಕ್ತ್ರಂ ಚ ಭೋಜನಂ
ಪರಹಸ್ತಾ ಪೂಜಾ ಯಾ ತ್ರಿವಿಧಂ ನರಕಂ ವ್ರಜೇತ್
ಎಂದುದಾಗಿ
ಇದನರಿಯದೆ ಬರಿಯುಪಚಾರಕ್ಕೆ ಮಾಡುವರೆಲ್ಲರು
ನಿಮ್ಮನೆತ್ತ ಬಲ್ಲರು, ಕೂಡಲಸಂಗಮದೇವ ! [1] 73

ದೇವರ ಪೂಜೆಯೆನ್ನುವುದು ಕೇವಲ ದೇಹಚೇಷ್ಟೆಯಲ್ಲ. ಅದು ಮನೋಭಿಷ್ಟೆ ಮತ್ತು ವ್ಯಕ್ತಿನಿಷ್ಠೆ. ಇದನ್ನರಿಯದೆ ಕೆಲವರು ಶಿವಪೂಜೆ ನಡೆದರಾಯಿತೆಂದು-ಕೊಂಡು, ಅದನ್ನು ತಮ್ಮ ಪರವಾಗಿ ಇನ್ನೊಬ್ಬರ ಕೈಯಿಂದಮಾಡಿಸುವರು. ಇದನ್ನು ಕಂಡು ಬಸವಣ್ಣನವರು ಜುಗುಪ್ಸೆಗೊಂಡು, ಎರಡು ನಿದರ್ಶನಗಳಿಂದ ಖಂಡಿಸಿರುವರು :

ಮೊದಲನೆಯದಾಗಿ ನಾವು ನಮ್ಮ ದೇಹಪೋಷಣೆಗಾಗಿ ಉಣ್ಣುವ ಊಟವನ್ನು, ನೀನು ನನಗಾಗಿ ಉಣ್ಣೆಂದು ಇತರರೊಡನೆ ವ್ಯವಹರಿಸುವುದಿಲ್ಲ. ಎರಡನೆಯದಾಗಿ ದೇಹ ಸುಖಕ್ಕಾಗಿ ಮಾಡುವ ಸ್ತ್ರೀಸಂಗವನ್ನು, ನನ್ನ ಪರವಾಗಿ ನೀನು, ಮಾಡೆಂದು ಅನ್ಯರಿಂದ ಮಾಡಿಸುವುದಿಲ್ಲ. ಹೀಗೆ ದೇಹಸಂಬಂಧವಾದ ಪೋಷಣೆ-ತೋಷಣೆಗಳನ್ನು ನಾವೇ ನೇರವಾಗಿ ಕೈಕೊಂಡ ಹೊರತು ಸಂತೃಪ್ತಿ ಸಾಧ್ಯವಿಲ್ಲ. ಅಂದಮೇಲೆ ನಮ್ಮ ಆತ್ಮಸಂಬಂಧವಾದ ಅರ್ಚನೆ ಪೂಜೆಗಳನ್ನು ನಾವೇ ತ್ರಿಕರಣ ಪೂರ್ವಕವಾಗಿ ಮಾಡದೇ ಹೋದರೆ, ಅವು ಕೇವಲ ಉಪಚಾರಗಳಾಗಿ, ದೇವರಿಗೆ ಸಗಿದ ಅಪಚಾರಗಳಾಗುವವು. ಅಂಥವರಿಗೆ ದೇವರು ದೂರ, ಆತ್ಮಸಾಕ್ಷಾತ್ಕಾರವೆನ್ನುವುದು ಇನ್ನೂ ದೂರ.

---

[1] (ಪ) ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ
ನಿಮ್ಮನೆತ್ತ ಬಲ್ಲರೋ ಕೂಡಲಸಂಗಮದೇವ (ಅನ್ಯತ್ರ)

[1]ದೂಷಕನಾವನೊಬ್ಬ[1] ದೇಶವ ಕೊಟ್ಟರೆ
[2]ಆಶೆಮಾಡಿಯಾತನ[2] ಹೊರೆಯಲಿರಬೇಡ [3]ಕಂಡಯ್ಯ[3]!
ಮಾದಾರ ಶಿವಭಕ್ತನಾದರೆ
ಆತನ [4]ಹೊರೆಯಲಿಪ್ಪುದು ಕರ ಲೇಸಯ್ಯ!
ತೊತ್ತಾಗಿಪ್ಪುದು ಕರ ಲೇಸಯ್ಯ[4]
[5]ಕಾಡಿ ಸೊಪ್ಪ[5] ತಂದು ಓಡಿನಲ್ಲಿ ಹುರಿದಿಟ್ಟುಕೊಂಡು
ಕೂಡಿಕೊಂಡಿಪ್ಪುದು ನಮ್ಮ ಕೂಡಲಸಂಗನ ಶರಣರ ! 74

ಸಾಮ್ರಾಟನಾದ ಅಯೋಗ್ಯನೊಬ್ಬನು ಅಪಾರವಾದ ರಾಜ್ಯವನ್ನೇ ಧಾರೆಯೆರೆದು ಕೊಟ್ಟೇನೆಂದರೂ, ನೀನು ಆಶೆಮಾಡಿ, ಅವನ ಹಂಗಿನಲ್ಲಿರಬೇಡ. ಅದು ನಿನ್ನ ಆತ್ಮದ ಅಧಃಪಾತ! ಆತ್ಮೋನ್ನತಿಯ ಸಾಧನೆಗೆ ಸಹಾಯಕವಾಗುವ ಶಿವಭಕ್ತನೊಬ್ಬನು ಅಸ್ಪೃಶ್ಯನೇ ಆಗಿರಲಿ, ಅವನ ಆಶ್ರಯದಲ್ಲಿದ್ದು, ಅವನಿಗೆ ದಾಸನಾಗಿದ್ದು, ಅವನಿಂದ ಪ್ರಸಾದವಾಗಿ ಬಂದ (ಅಂಬಲಿ)ತುಂಬೆಯ ಸೊಪ್ಪನಾದರೂ (ಓಡಿನಲ್ಲಿಹುರಿದು)ಸೇವಿಸಿ ಕೊಂಡಿರುವುದು ಶ್ರೇಯಸ್ಕರ. ಸವಿಸವಿಯಾದ ಉಣಿಸು, ಸುಪ್ಪತ್ತಿಗೆಗಳ ಲಾಲಸೆಗೆ ಮನಸೋತು ನಿನ್ನ ಆತ್ಮವನ್ನು ನೀಚರಿಗೆ ಮಾರಿಕೊಂಡೀಯೆ ಜೋಪಾನ.

---

[1] (ಕ) ದೂಷಕನವನೊಬ್ಬ (ಅನ್ಯತ್ರ)
[2] (ಹಸು) ಆಶೆಮಾಡಿ ಅವನ (ಅನ್ಯತ್ರ)
[3] ಚ್ಚ (ಅನ್ಯತ್ರ)
[4] (ಹಸು) ಭೃತ್ಯನಾಗಿಪ್ಪುದು ಕರಲೇಸು ಕಂಡಯ್ಯ
ತೊತ್ತಾಗಿಪ್ಪುದು ಕರಲೇಸು ಕಂಡಯ್ಯ (ಕ)
ಭೃತ್ಯನಾಗಿಪ್ಪುದು ಕರಲೇಸಯ್ಯ
ತೊತ್ತಾಗಿಪ್ಪುದು ಕರಲೇಸಯ್ಯ (ನಿ) (ಸ)
[5] (ಹಳ) ಕಾಡಸೊಪ್ಪು (ಅನ್ಯತ್ರ)

ಇಂದ್ರಿಯ ನಿಗ್ರಹವ ಮಾಡಿದರೆ
ಹೊಂದುವವು ದೋಷಂಗಳು !
ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು !
ಸತಿ-ಪತಿ-ರತಿ–ಸುಖವ ಬಿಟ್ಟರೆ ಸಿರಿಯಾಳ ಚೆಂಗಳೆಯರು?
ಸತಿ-ಪತಿ-ರತಿ-ಸುಖಭೋಗೋಪಭೋಗವಿಳಾಸವ
ಬಿಟ್ಟನೇ ಸಿಂಧು ಬಲ್ಲಾಳನು?
ನಿಮ್ಮ ಮುಟ್ಟಿ ಪರಧನ-ಪರಸತಿಯರಿಗೆಳಸಿದರೆ
ನಿಮ್ಮ ಚರಣಕ್ಕೆ[1] ದೂರ ಕೂಡಲಸಂಗಮದೇವ ! 75

ಸಂಸಾರವು ತ್ಯಾಜ್ಯವಲ್ಲ. ಇಂದ್ರಿಯಗಳ ಸಹಜೋಚಿತ ಪ್ರವೃತ್ತಿಗಳನ್ನುತೀರ ತಡೆಗಟ್ಟಿದರೆ ಅವು ಮತ್ತೆಲ್ಲಿಯೋ ಕಟ್ಟೆಯೊಡೆದು ಮನೆ ಮಠಗಳನ್ನು ಮುಳುಗಿಸಿ ಪೈರು ಪಚ್ಚೆಯನ್ನು ಕೊಚ್ಚಿ, ನಮ್ಮನ್ನು ಕಡುಕಷ್ಟಕ್ಕೀಡುಮಾಡುವವು. ಕೆರೆಯುಳಿದು ನೀರು ನಿಂತಿರಬೇಕಾದರೆ ಕೋಡಿ ಹರಿದಿರಬೇಕು ! ಹಾಗೆಯೇ, ಎಲ್ಲ ಧರ್ಮಕಾರ್ಯಗಳಿಗೂ ಸಾಧನರೂಪವಾದ ಈ ದೇಹ ಅಚ್ಚುಕಟ್ಟಾಗಿದ್ದು, ಪ್ರಸನ್ನತೆ ನೆಲೆಗೊಂಡು, ಜೀವನ ಹಸನಾಗಬೇಕಾದರೆ, ಪಂಚೇಂದ್ರಿಯಗಳ ಪರಿಷ್ಕೃತಕಾಮನೆಗಳ ವಿರುದ್ಧ ಹೋರಾಡಿ ತೀರ ನಿರೋಧಮಾಡುವುದು ಬೇಡ. ಇನ್ನೊಬ್ಬರ ಗಂಟಿಗೆ ಗುಣಾಕಾರ ಹಾಕದೆ, ಕಾಯಕದಿಂದಾರ್ಜಿಸಿದ ಸ್ವಂತಧನದಿಂದ ಸುಖಪಟ್ಟರೇನು ತಪ್ಪು ? ಕಂಡವರ ಹೆಣ್ಣಿಗೆ ಕಣ್ಣುಹಾಕದೆ, ವೈವಸಾಕ್ಷಿಯಲ್ಲಿ ಕೈ ಹಿಡಿದ ಮನದನ್ನೆಯೊಡನೆ ಸೊಗಬಾಳಿದರೇನು ತಪ್ಪು ? ಸಿರಿಯಾಳ ಚೆಂಗಳೆಯರೆಂಬ ಶಿವಶರಣ ದಂಪತಿಗಳು ತಮ್ಮ ಸಂಸಾರದ ಪ್ರಿಯತಮಫಲವನ್ನು ಶಿವಾರ್ಪಿತಮಾಡಿ ಶಿವನಿಗೆ ಹತ್ತಿರವಾಗಲಿಲ್ಲವೆ ? ಭೋಗ ಭಾಗ್ಯಗಳಲ್ಲಿ ಬಲ್ಲಿದನಾದ ಸಿಂಧುಬಲ್ಲಾಳನು ತನ್ನ ಮಾನಾಭಿಮಾನದ ತೊಟ್ಟನ್ನು ಕತ್ತರಿಸಿ ಶಿವನಿಗೆ ಅರ್ಪಿಸಿ ಸುಖಿಸಿ, ಶಿವಸಾಯುಜ್ಯವನ್ನು ಸಾಧಿಸಲಿಲ್ಲವೆ ? ಹಾಗಾದಲ್ಲಿ ಭೋಗದಲ್ಲಿ ಬಾಧಕವಾದುದೇನೂ ಇಲ್ಲ.

---

[1] ನಿಮ್ಮಾಚಾರಕ್ಕೆ (ಶಿ)

ಪಾಪಿಯಧನ ಪ್ರಾಯಶ್ಚಿತ್ತಕ್ಕಲ್ಲದೆ
ಸತ್ಪಾತ್ರಕ್ಕೆ ಸಲ್ಲದಯ್ಯ !
ನಾಯ ಹಾಲು ನಾಯಿಗಲ್ಲದೆ
ಪಂಚಾಮೃತಕ್ಕೆ ಸಲ್ಲದಯ್ಯ !
ನಮ್ಮ ಕೂಡಲಸಂಗನ ಶರಣರಿಗಲ್ಲದ
ಅರ್ಥ[1] ವ್ಯರ್ಥ ಕಂಡಯ್ಯ 76

ಪಾಪಿಯೆಂಬವನೊಂದು ನಾಯಿ, ಪಾಪಮಾಡಿ ಕೂಡಿಟ್ಟ ಅವನ ಹಣ--ಮರಿ ಹಾಕಿದ ನಾಯಿ ತನ್ನ ಕೆಚ್ಚಲಲ್ಲಿ ತುಂಬಿಕೊಂಡ ಹಾಲು. ಅದೆಲ್ಲ ತನ್ನ ದುರ್ವ್ಯವಹಾರದ ಗರ್ಭದಿಂದಿಳಿದ ಹಲವಾರು ಪಾಪಸಂತಾನದ ಪಾಲಲ್ಲದೆ ಶಿವನುಜ್ಞನಕ್ಕಲ್ಲ. ಸಜ್ಜನ ಸಂತೋಷಕ್ಕಲ್ಲ.

ಜನ ಪಾಪದಿಂದ ಧನವನ್ನು ಆರ್ಜಿಸುವುದೇಕೆ? ಹಾಗೆ ಆರ್ಜಿಸಿದ ಧನವನ್ನೆಲ್ಲಾ ಅದೇ ಪಾಪ ಪರಿಹಾರಕಪ್ರಾಯಶ್ಚಿತ್ತಕ್ಕೆಂದು ವಂಚಕ ಪುರೋಹಿತಪರಿವಾರಕ್ಕೆ ಹಂಚು ವುದೇಕೆ ? ಹಾವನ್ನು ಹೊಡೆದು ಹದ್ದಿಗೆ ಹಾಕುವ ಜಗದ ಈ ತಿಳಿಗೇಡಿ ನಡೆವಳಿ ಯನ್ನು ತೆಗಳಿರುವರು ಬಸವಣ್ಣನವರು.

ಮತ್ತು ಪಾಪಿಯು ತನ್ನ ಪಾಪವನ್ನು ಕಳೆದುಕೊಳ್ಳಲೆಂದು, ಪ್ರಾಯಶ್ಚಿತ್ತ ಕ್ಕಾಗಿ ಹಣವನ್ನು ಪೋಲುಮಾಡುವುದು ವ್ಯರ್ಥ. ಪಾಪಪರಿಹಾರಕ್ಕೆಂದು--ಲೋಕಸೇವೆ ಗಲ್ಲದೆ ಮತ್ತಿತರಕ್ಕೆ ಮಾಡಿದ ವ್ಯಯ ಅಪವ್ಯಯ. ಮೇಲಾಗಿ ಪಾಪಾರ್ಜಿತವಾದುದನ್ನು ಸ್ವೀಕರಿಸಲು ಶರಣರು ಬಲ್ಲರು. ಆದುದರಿಂದ ಮೊದಲನೆಯದಾಗಿ, ನಮ್ಮ ಅರ್ಥವು ಧರ್ಮದ ಆಧಾರದ ಮೇಲೆ ಆರ್ಜಿಸಿದುದಾಗಿರಬೇಕು. ಎರಡನೆಯದಾಗಿ, ಆ ಧರ್ಮಧನ ವನ್ನು ಸತ್ಪಾತ್ರಕ್ಕೆ ಸಲ್ಲಿಸಬೇಕು ಅಂಥವನೇ ನೈಜ ಶ್ರೀಮಂತ, ಅವನೇ ಆತ್ಮಶ್ರೀಯುತ.

[1] (ಹಸು) ಶರಣರಿಗಲ್ಲದೆ ಮಾಡುವ ಅರ್ಥ (ಸ) (ಹಳ)
ಶರಣರಿಗಲ್ಲದೆ ಮಾಡಿದರ್ಥ (ಚ)

ಉಂಬ ಬಟ್ಟಲು ಬೇರೆ ಕಂಚಲ್ಲ !
ನೋಡುವ ದರ್ಪಣ ಬೇರೆ ಕಂಚಲ್ಲ!
ಭಾಂಡ ಒಂದೇ, ಭಾಜನ ಒಂದೇ !
ಬೆಳಗೆ ಕನ್ನಡಿ ಎನಿಸಿತ್ತಯ್ಯ !
ಅರಿದರೆ ಶರಣನು ! ಮರೆದರೆ ಮಾನವನು ! !
ಮರೆಯದೆ ಪೂಜಿಸಿ ನಮ್ಮ ಕೂಡಲಸಂಗಯ್ಯನ ! 77

ಉಣ್ಣುವ ಬಟ್ಟಲಿಗೆ ಬಳಸಿದ ಕಂಚೇ ಬೇರೆಯಲ್ಲ. ನೋಡುವ ಕನ್ನಡಿಗೆ ಬಳಸಿದ ಕಂಚೇ ಬೇರೆಯಲ್ಲ ! ಎರಡರ ಸತ್ವ-ಸಾಮಗ್ರಿಯೂ ಒಂದೇ. ಆದರೆ ಕಂಚು ಹೇಗಿದ್ದರೂ ಉಣ್ಣುವುದಕ್ಕೆ ಬಂದೀತು. ಯಾರಾದರೂ ಅದನ್ನು ತಮ್ಮ ಉದರ ಕಾರ್ಯಕ್ಕೆ ಬಳಸಿ ಮೂಲೆಗೊತ್ತರಿಸಿ ಇಡಬಹುದು. ಆದರೆ ತಮ್ಮ ಅಂದ–ಚಂದವನ್ನು ನೋಡಿಕೊಂಡು ಓರೆಕೋರೆಗಳನ್ನು ತಿದ್ದಿಕೊಳ್ಳಲನುವಾಗುವ ಕಂಚಾದರೋ ಕನ್ನಡಿಯಾಗಬೇಕಾದರೆ–ಕೊಳೆಯನ್ನೆಲ್ಲಾ ತೆಗೆದು ಚೆನ್ನಾಗಿ ಬೆಳಗಿರಬೇಕು, ಒಪ್ಪವಾಗಿರಬೇಕು, ಉಬ್ಬು ತಗ್ಗುಗಳಿಲ್ಲದೆ ಸಮತಲವಾಗಿರಬೇಕು, ಥಳಥಳಿಸುತ್ತಿರಬೇಕು–ಅದಕ್ಕೆ ಬೇಕಾದ ಅರ್ಹತೆಗಳು ಅನೇಕ !

ಹಾಗೆಯೇ ಮಾನವರೆಲ್ಲರಿಗಿರುವ ದೇಹ-ಜೀವ-ಆತ್ಮಗಳು ಒಂದೇ. ಹೀನಮಾನವನು ತನ್ನ ದೇಹ–ಜೀವ–ಆತ್ಮಗಳನ್ನು ಸಂಸ್ಕರಿಸಿಕೊಳ್ಳದಿದ್ದರೂ ಸಾಗೀತು. ಏಕೆಂದರೆ ಅವನು ತನ್ನ ಕಸುವು–ಕರ್ತವ್ಯಗಳನ್ನು ಮರೆತವನು, ನಿತ್ಯನೀರಸ ಜೀವನ ನಿರತ, ತುಚ್ಛ ಸುಖ ಸಂತೃಪ್ತ ! ಆದರೆ ಅನ್ಯರಿಗೆ ಆದರ್ಶವಾಗಬೇಕಾದ ದೇವಮಾನವಶರಣನಾದರೋ ದೇವರನ್ನು ಮರೆಯದೆ, ದೇವರ ನೆಲೆಗೆ ನಿಲುಕುವ ಉದಾತ್ತವಾದ ನಿಲ್ಮೆವನ್ನು ಹೊಂದಬೇಕೆಂಬುದನ್ನರಿತು, ಧಾತುಶುದ್ಧಿಯನ್ನೂ ಸಮಧಾತುವನ್ನೂ ಸರ್ವಾಂಗಪ್ರಭೆಯನ್ನೂ ಅಳವಡಿಸಿಕೊಂಡವನು. ಮಾನವನ ಮರೆವೆಗೂ, ಶರಣನ ಅರಿವಿಗೂ ಎಷ್ಟು ಅಂತರ ? ಪ್ರಪಾತ–ಗೌರೀಶಂಕರಗಳ ಮಹದಂತರ !

ಎಲ್ಲರಲ್ಲೂ ಎಲ್ಲ ಶಕ್ತಿಗಳೂ ನಿಹಿತವಾಗಿವೆ. ಆದರೆ ಅವನ್ನು ವಿಹಿತವಾಗಿ ಬೆಳೆಸಿಕೊಳ್ಳುವ ಸಾಧನೆ–ಸಿದ್ಧಿಗಳೇ ಸಾಮಾನ್ಯನನ್ನೂ ಶರಣನನ್ನೂ ಬೇರ್ಪಡಿಸುವ ಅಂಶಗಳು.

---

1 (ಜ) ಪೂಜಿಸು ಕೂಡಲಸಂಗನ (ಅನ್ಯತ್ರ)

ಎರೆದರೆ ನೆನೆಯದು ! ಮರೆದರೆ ಬಾಡದು !!
ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ [1] ನೋಡಯ್ಯ [1] !
ಕೂಡಲ ಸಂಗಮದೇವಯ್ಯ[1] !
ಜಂಗಮಕ್ಕೆರೆದರೆ ಸ್ಥಾವರ[2]ನೆನೆ[2]ಯಿತ್ತು ! 78

ಜಂಗಮಲಿಂಗಸ್ವರೂಪಿಯಾದ ಲೋಕದ ಸೇವೆಗೆ ತನುವನ್ನು ತೇಯದೆ, ಧನವನ್ನು ಈಯದೆ, ಕಲ್ಲಿನ ಲಿಂಗಕ್ಕೆ ನಿತ್ಯಾಭಿಷೇಕಮಾಡಿದರೇನು ಪ್ರಯೋಜನ ? ಸತ್ಯಲೋಕಕ್ಕೆ ನಿತ್ಯ ದಾಸೋಹಮಾಡದೆ, ಕಲ್ಲಿನ ಲಿಂಗಕ್ಕೆ ಸಲ್ಲಿಸುವ ಪೂಜೆಗೆ ಬಸವಣ್ಣನವರು ಮಾನ್ಯತೆಯನ್ನು ಕೊಡಲಿಲ್ಲ. ಎಷ್ಟು ನೀರೆರೆದರೂ ನೆನೆಯದ, ಒಂದು ಪಕ್ಷ ಮರೆತರೆ ಬಾಡದ, ಲಿಂಗಾರ್ಚನೆ ಹುರುಳಿಲ್ಲವೆಂದು ದಿಟ್ಟತನದಿಂದ ಟೀಕಿಸಿ, ಜೀವಕೋಟಿಯನ್ನು ತಣಿಸಿದಲ್ಲದೆ ಲಿಂಗದೇವನು ನೆನೆಯುವುದಿಲ್ಲವೆಂದು ಮಾರ್ಮಿಕವಾಗಿ ಆಡಿರುವರು.

ಮಾಡಿದುದನ್ನು ನೆನೆಯುವ, ಮರೆತರೆ ಮರುಗುವ ಈ ಜೀವಲೋಕವಾದರೋ ಅನ್ನ-ನೀರು-ವಸ್ತ್ರ-ವಸತಿಗಳಿಗಾಗಿ, ಅರಿವು ಆರೋಗ್ಯಗಳಿಗಾಗಿ ಹಾಹಾಕಾರವೆತ್ತಿರುವಲ್ಲಿ, ಅದರ ಅಭಿವೃದ್ಧಿಗಾಗಿ ನಿನ್ನ ಮನವನ್ನು ಮುಡುಪಿಡು, ಧನವನ್ನು ನಿಧಿಯಾಗಿಡು, ಅದರ ಕಲ್ಯಾಣಕ್ಕಾಗಿ ದುಡಿ, ದುಡಿದುಡಿದು ಹಣ್ಣಾಗಿ ಅದಕ್ಕಾಗಿಯೇ ಮಡಿ. ಈ ಲೋಕಾರಾಧನೆಯೇ ಶಿವರಾಧನೆ—ಎಂದು ಸಾರಿ ಹೇಳಿ, ಕರ್ಮಜಡಧರ್ಮಕ್ಕೆ ರಚನಾತ್ಮಕ ಕ್ರಿಯಾಶೀಲದ ಹೊಸ ತಿರುವನ್ನು ಕೊಟ್ಟವರೆಂದರೆ ಬಸವಣ್ಣನವರು. ಅವರ ಪ್ರಕಾರ ದೇವರು ಮೂಲಮೂರ್ತಿಯಾದರೆ ಲೋಕವು ಅದರ ಉತ್ಸವಮೂರ್ತಿ ಅದನ್ನು ಅಲಂಕರಿಸಬೇಕು, ಅದನ್ನು ಮೆರೆಸಬೇಕು. ಆಗಲೇ ಮೂಲಮೂರ್ತಿಗೆ ಪ್ರೀತಿ.

1 (ಹಸು) × (ಅನ್ಯತ್ರ)
[2] ಸನೆ (ಚ(

ಕಲ್ಲನಾಗರ ಕಂಡರೆ ಹಾಲನೆರೆ ಎಂಬರು !
ದಿಟದ ನಾಗರ ಕಂಡರೆ [1](ಕೋಲೆಂಬರಯ್ಯ) !
ಉಂಬ ಜಂಗಮ ಬಂದರೆ ನಡೆ ಎಂಬರು !
ಉಣ್ಣದಲಿಂಗಕ್ಕೆ ಬೋನವ ಹಿಡಿ ಎಂಬರಯ್ಯ !
ನಮ್ಮ ಕೂಡಲಸಂಗನ ಶರಣರ ಕಂಡು
ಉದಾಸೀನವ ಮಾಡಿದರೆ
ಕಲ್ಲ ತಾಗಿದ[2]ಮಿಟ್ಟೆಯಂತಪ್ಪರಯ್ಯ ! 79

ಲಿಂಗಾರ್ಪಿತಮಾಡಿ ತಾವು ಕೈಯಿಟ್ಟ ತಳಿಗೆಯ ಅನ್ನದಲ್ಲಿ ಒಂದು ತುತ್ತನ್ನೆತ್ತಿ, ಹಸಿದು ಬಂದು ಬೇಡಿದ ನಿರ್ಗತಿಕನಿಗೆ ನೀಡುವುದಿಲ್ಲ. ಹಸಿಯದ, ಬೇಡದ, ತಿನ್ನದ ಕಲ್ಲಿನ ಲಿಂಗಕ್ಕೆ ಉಣ್ಣೆಂದು ಬಗೆಬಗೆಯ ಉಣಿಸನ್ನು ಅದರ ಮೂರ್ತಿಗೇ ಒಡ್ಡುವರು. ನಿಜವಿಲ್ಲದ ಈ ಜನರ ಮರುಳಾಟವನ್ನೂ ಕಳ್ಳಾಟವನ್ನೂ ಕಂಡು—ಕಲ್ಲನಾಗರಿಗೆ ಹಾಲನ್ನೆರೆಯುತ್ತ, ನಿಜವಾದ ಹಾವನ್ನು ಕಂಡು ಕಲ್ಲು-ಕೋಲೆಂದು ಕೊಲ್ಲಲು ಕೂಗಾಡುವ ಜನರ ವಿಪರ್ಯಾಸದೊಡನೆ ಅದನ್ನು ಹೋಲಿಸಿ, ಉಪಹಾಸ ಮಾಡಿರುವವರು ಬಸವಣ್ಣನವರು. ಶಿವನನ್ನೇ ಉದಾಸೀನ ಮಾಡಿದರೂ—ಅದನ್ನು ಶಿವನು ಸಹಿಸಿಯಾನು, ಆದರೆ ಶಿವಶರಣರಿಗೆ ಉದಾಸೀನಮಾಡಿದರೆ ಶಿವ ಸಹಿಸನೆಂದು ಎಚ್ಚರಿಸಿರುವವರು—ಅವತು.

ಸುಳ್ಳಿಗೆ ಸೂರೆಗೊಟ್ಟು, ಸತ್ಯಕ್ಕೆ ಮೋರೆ ಮುರಿಯುವ ಭೂತಾಟದ ಜನ ಈ ಮಾತನ್ನು ಮರೆಯದಿರಲಿ.

---

1 ಕೊಲೆಂಬರಯ್ಯ (ಕ) (=ಕೋಲೆಂಬರಯ್ಯ?L.B.) ಕೊಲ್ಲೆಂಬರಯ್ಯ (ಅನ್ಯತ್ರ)
2 ಮಿಟ್ಟೆ (ನಿ) (ಸ) (ಚ) ಮಿಂಟ್ಟೆ (ಹಸು) ಮಿಟ್ಟೆ (ಹಳ)

ದ್ವೈತಾದ್ವೈತವನೋದಿ ಏನ ಮಾಡುವಿರಯ್ಯ ?
ನಮ್ಮ (1ಶರಣರಿಗೆ ಉರಿಗರಗಾಗಿ)1 ಕರಗದನ್ನಕ್ಕ ?
ಸ್ಥಾವರ-ಜಂಗಮ 2ಒಂದೇ ಎಂದು2 ನಂಬದನ್ನಕ್ಕ ?
ಕೂಡಲಸಂಗಮದೇವ,
ಬರಿಯ ಮಾತಿನ ಮಾಲೆಯಲೇನಹುದು ? ! 80

ದ್ವೈತವನ್ನು ಓದಿ ದೇವರೇ ಬೇರೆ, ಈ ಜಗತ್ತೇ ಬೇರೆ ಎನ್ನುವುದಾಗಲಿ, ಅದ್ವೈತವನ್ನು ಓದಿ ದೇವರೆಂಬುದೇ ಸತ್ಯ, ಈ ಜಗತ್ತು ಮಿಥ್ಯೆ ಎನ್ನುವುದಾಗಲಿ ಬಸವಣ್ಣನವರಿಗೆ ಹಿಡಿಸದು. ದ್ವೈತಾದ್ವೈತಗಳು ಸಮ್ಮೇಳಗೊಂಡ ಲಿಂಗಾಯತ ಧರ್ಮದ ಪ್ರಕಾರ–ದೇವರೂ ಸತ್ಯ, ಈ ಲೋಕವೂ ಸತ್ಯ,ಅಷ್ಟೇ ಅಲ್ಲ; ದೇವರೂ ಈ ಲೋಕವೂ ಸಮಾನಸತ್ಯ ಮತ್ತು ಸೇವ್ಯ. ಅದನ್ನೇ ಈ ವಚನದಲ್ಲಿ ಬಸವಣ್ಣನವರು ಸ್ಪಷ್ಟಪಡಿಸಿರುವರು. ಈ ಉದಾತ್ತ ಸತ್ಯದ ಸಂವೇದನೆಯಿಲ್ಲದೆ ದ್ವೈತ-ಅದ್ವೈತ ವೆಂದು ಓದು-ವಾದಗಳಲ್ಲಿ ತೊಡಗಿದ್ದು ಪ್ರಯೋಜನವೇನು ? ಅದಕ್ಕಿಂತ ಶರಣರ ಸಂದೇಶಕ್ಕೆ ಮಣಿದು, ಜಗತ್ತನ್ನೇ ಜಗದೀಶನೆಂದು ಭಾವಿಸಿ ಸೇವಾಮನೋಭಾವ ದಿಂದ ದುಡಿದರೆ ಜನ್ಮ ಸಾರ್ಥಕವಾಗುವುದು.

ನಾಳೆ 3ಬಪ್ಪುದು3 ನಮಗಿಂದೇ ಬರಲಿ
ಇಂದು 3ಬಪ್ಪುದು3 ನಮಗೀಗಲೇ ಬರಲಿ!
ಇದಕಾರಂಜುವರು ? ಇದಕಾರಳುಕುವರು ?
'ಜಾತಸ್ಯ ಮರಣಂ ಧ್ರುವಂ' ಎಂದುದಾಗಿ
4ಕೂಡಲಸಂಗಮದೇವ,
ತಪ್ಪಿಸುವಡೆ ಹರಿ4–ಬ್ರಹ್ಮಾದಿಗಳಿಗಳವಲ್ಲ! 81

---

1 ಶರಣರಿಗುರಿಗರಗಾಗಿ (ಸರ್ವತ್ರ)
2 ಒಂದೆಂದು (ಕ)
3 ಬಹುದು (ವ)
4 (ಚ)(ಏ) ಕೂಡಲಸಂಗಮದೇವರು ಬರೆದ ಬರೆಹವ ತಪ್ಪಿಸುವರೆ ರಿ (ಹಳ)(ಹಸ)

ಲೇಸೆನಿಸಿಕೊಂಡು ಐದು 'ದಿನ' ಬದುಕಿದರೇನು ?
ಲೇಸೆನಿಸಿಕೊಂಡು ನಾಲ್ಕು 'ದಿನ' ಬದುಕಿದರೇನು ?
ಲೇಸೆನಿಸಿಕೊಂಡು ಮೂರು 'ದಿನ' ಬದುಕಿದರೇನು ?
ಲೇಸೆನಿಸಿಕೊಂಡು ಎರಡು 'ದಿನ' ಬದುಕಿದರೇನು ?
[1]ಲೇಸೆನಿಸಿಕೊಂಡು ಒಂದು 'ದಿನ' ಬದುಕಿದರೇನು ?

ಗ್ರಂಥ[2]
ಜೀವಿತಂ ಶಿವಭಕ್ತಾನಾಂ ವರಂ ಪಂಚ ದಿನಾನಿ ಚ
[3]ನಾಜಕಲ್ಪಸಹಸ್ರಂ ಚಃ ಭಕ್ತಿ ಹೀನಂ ತು ಶಂಕರಿ ॥

ಎಂದುದಾಗಿ
ಕೂಡಲಸಂಗನ ಶರಣರ ವಚನದಲ್ಲಿ ಲೇಸೆನಿಸಿಕೊಂಡು
[4]ಒಂದು ದಿನ ಬದುಕಿದರೆ ಸಾಕು[4] ! 82

ಸಜ್ಜನರಿಗೆ ಜಿಗುಪ್ಸೆ ತರುವ (ತರವಲ್ಲದ) ಜೀವನವನ್ನು ಅಜಕಲ್ಪಸಹಸ್ರವರ್ಷ-ಪರ್ಯಂತ ಜೀವಿಸಿದರೇನು ? ಆ ಸಜ್ಜನರಿಂದ ಸೈಯೆನಿಸಿಕೊಂಡು ಒಂದು ಕೈಯ ಬೆರಳ ಮೇಲೆ ಎಣಿಸುವಷ್ಟು ದಿನ ಬದುಕಿದರೂ ಸಾಕು ! ಪರಹಿಂಸಕದೀರ್ಘಜೀವನ ದಿಂದ ಕೇವಲ ಲೋಕಪೀಡೆ. ಪರಾರ್ಥ-ಸಮರ್ಪಿತವಾದ ಬಾಳು ಅಲ್ಪಾವಧಿಯ ದಾದರೂ ಅಮರವೆನಿಸೀತು.

---

1 ಲೇಸೆನಿಸಿಕೊಂಡು ಒಂದು ದಿವಸ ಬದುಕಿದರೇನು ಗ್ರಂಥ: (ಚ)
2 *(ಸ) (ಹ) ದಿವಸ (ಅನ್ಯತ್ರ)*
3 (ಸ) ಅಜಕಲ್ಪ ರಹಸ್ರೇಭ್ಯೋ (ಚ)
4 (ಹಸು) ಒಂದೇ ದಿವಸ ಬದುಕಿದರೆ ಸಾಕು (ಚ)
ಒಂದು ದಿನ ಬದುಕಿದರೇನೋ (ಪಳ) (ಸ)
ಒಂದು ದಿನ ಬದುಕಿದರೇನು (ಕ)

ಕೃಷಿ-ಕೃತ್ಯ-ಕಾಯಕದಿಂದಾದರೇನು ?
ತನು-ಮನವ ಬಳಲಿಸಿ ತಂದು ದಾಸೋಹವ ಮಾಡುವ
ಪರಮ ಸದ್ಭಕ್ತನ ಪಾದವ ತೋರಯ್ಯ ಎನಗೆ!
ಅದೆಂತೆನೆ:
ಆತನ ತನು ಶುದ್ಧ! ಆತನ ಮನ ಶುದ್ಧ!
ಆತನ ನಡೆ ಶುದ್ಧ! ನುಡಿಯೆಲ್ಲವು ಪಾವನ!
ಆತಂಗೆ ಉಪದೇಶವ ಮಾಡಿದಾತನೆ ಪರಮಸದ್ಗುರು!
ಅಂತಪ್ಪ ಸದ್ಭಕ್ತನ ಮನೆಯು ಕೈಲಾಸವೆಂದು ಹೊಕ್ಕು.
ಲಿಂಗಾರ್ಚನೆಯ ಮಾಡುವ ಜಂಗಮವೇ ಜಗತ್ಪಾವನ!
ಇಂತಪ್ಪವರ ನಾನು ನೆರೆ ನಂಬಿ
ನಮೋ ನಮೋ ಎಂಬೆನಯ್ಯ ಕೂಡಲಸಂಗಮದೇವ! 83

ಎಲ್ಲರೂ ದೀಕ್ಷೆ ತೊಡುವರೇ, ಎಲ್ಲರೂ ದೀಕ್ಷೆ ಕೊಡುವರೇ! ಸ್ವಂತ ದುಡಿಮೆಯಿಂದ ಬಂದ ಶುದ್ಧಪದಾರ್ಥಗಳಿಂದ ಗುರುಲಿಂಗಜಂಗಮದಾಸೋಹ ಮಾಡುವೆನೆಂಬ ದೃಢ ನಿರ್ಧಾರವಿಲ್ಲದವನಿಗೆ ಕೊಡುವ ದೀಕ್ಷೆಯೇನು, ಅವನು ತೊಡುವ ದೀಕ್ಷೆಯಿನ್ನೇನು. ದೃಢನಿರ್ಧಾರದ ಧೀರನಿಗೆ ಅನುವರಿತ ಗುರು ಕೈಯಲ್ಲಿ ಕೊಟ್ಟ ಕಲ್ಲು ಲಿಂಗವಾಗುವುದು, ಕಿವಿಯಲ್ಲಿ ಹೇಳಿದ ಮಾತು ಮಂತ್ರವಾಗುವುದು. ಆ ಜಾಡನ್ನು ಹಿಡಿದು, ದುಡಿದು ಬಂದ ದುಡಿಮೆಯಿಂದ ಜಗತ್ತನ್ನು ತಣಿಸಲು ಯತ್ನಿಸುವ ಭಕ್ತನೇ ಸಾಕ್ಷಾತ್ ಶಿವ, ಅವನ ಮನೆಯೇ ಕೈಲಾಸ. ಅಂತಹ ಮಹನೀಯನ ಮನೆಯಲ್ಲಿ ಶಿವಪೂಜೆ ಮಾಡಿ ಪ್ರಸಾದವನ್ನು ತೆಗೆದುಕೊಳ್ಳಬೇಕು ಜಂಗಮ! ಹಾಗಲ್ಲದೆ ಸಿರಿವಂತರ ಮನೆಯ ಸವಿಕವಳಕ್ಕೆ ಆಸೆಪಟ್ಟು, ಸಾತ್ವಿಕನಾದ ಬಡವನ ಮನೆಯನ್ನು ಕಡೆಗಣಿಸಿದರೆ ಆ ಜಂಗಮ ಪತಿತನಾಗುವನು.

ಸ್ವಂತ ದುಡಿಮೆಯಿಂದ, ಸರಳವಾಗಿ, ಲೋಕೋಪಯೋಗಿಯಾಗಿ, ಬಾಳುವ ಜನ ಬೇಕು. ಆ ಜನರನ್ನು ಪುರಸ್ಕರಿಸಿ ಹುರಿದುಂಬಿಸುವ ಜಂಗಮ ಬೇಕು. ಈ ಎರಡು ವಿಧವಾದ ಶ್ರೇಷ್ಠಜನರಿಂದಲೇ ಲೋಕಕಲ್ಯಾಣ ಸಾಧ್ಯ. ಭೂಮಿಯನ್ನು ಕೈಲಾಸವಾಗಿಸಲು ಬಸವಣ್ಣನವರು ನೆಚ್ಚಿಕೊಂಡಿದ್ದುದು ಇಂಥವರ ಬೆಂಬಲವನ್ನೇ.

ದೇವ ದೇವ ಬಿನ್ನಪ[1]ವ ಅ[1]ವಧಾರು !
ವಿಪ್ರ ಮೊದಲು ಅಂತ್ಯಜ ಕಡೆಯಾಗಿ
ಶಿವಭಕ್ತರಾದವರೆ[2]ನೆಲ್ಲರನು ಒಂದೇ[2] ಎಂಬೆ
ಹಾರುವ ಮೊದಲು ಶ್ವಪಚ ಕಡೆಯಾಗಿ
ಭವಿಯಾದವರೆ[3]ನೆಲ್ಲರನು ಒಂದೇ[3] ಎಂಬೆ !
ಈ ಹೀಂಗೆಂದು ನಂಬುವುದೆನ್ನ ಮನವು ! !
ಈ ನುಡಿದ ನುಡಿಯೊಳಗೆ ಎಳ್ಳ ಮೊನೆಯಷ್ಟು ಸಂದೇಹವುಳ್ಳರೆ
ಹಲುದೋ[1]ರ[1] ಮೂಗ ಕೊಯಿ ಕೂಡಲಸಂಗಮದೇವ ! 84.

ಜಗದ ಜೀವರನ್ನು ಉತ್ತಮ-ಅಧಮವೆಂದು ವಿಂಗಡಿಸಲಿರುವ ಗುರುತು— ಆಯಾ ಜೀವಾತ್ಮದಲ್ಲಿ ನಿಷ್ಠವಾದ ಶಿವಕಾಂಕ್ಷೆಯೇ ಹೊರತು, ಜನ್ಮವಿತ್ತ ಜಾತಿ ಪಂಗಡಗಳಲ್ಲ. ಬಸವಣ್ಣನವರು ದೇವರ ಮುಂದೆ ಪ್ರತಿಜ್ಞೆಮಾಡಿ ಹೇಳುತ್ತಾರೆ— ಒಬ್ಬನು ಬ್ರಾಹ್ಮಣೋತ್ತಮನೆನಿಸಿ ಧರ್ಮಬಾಹಿರನಾಗಿದ್ದರೆ ಅವನನ್ನು ಶ್ವಪಚಾಧಮ ನೆನ್ನಲು ಹಿಂತೆಗೆಯುವುದಿಲ್ಲ, ಶ್ವಪಚಾಧಮನೋರ್ವನು ಶಿವನಿಷ್ಠೆಯುಳ್ಳವನಾಗಿದ್ದರೆ ಅವನನ್ನು ಬ್ರಾಹ್ಮಣೋತ್ತಮನೆನ್ನಲು ಹಿಂಜರಿಯುವುದಿಲ್ಲ—ಎಂದು. ಅರ್ಥಾತ್ ಶಿವಭಕ್ತರಲ್ಲಿ ಅವರು ಮಾಡುವ ಕಾಯಕದ ಮೇಲಿಂದ, ಇವನು ಕೀಳುಕುಲದವನು, ಇವನು ಮೇಲುಕುಲದವನೆಂದು ತಾರತಮ್ಯಮಾಡಬಾರದು ; ಮತ್ತು ಶಿವನಲ್ಲಿ ಭಕ್ತಿಯಿಲ್ಲದವನನ್ನು ಗತಾನುಗತಿಕವಾಗಿ ಪುರಸ್ಕರಿಸಲೂಕೂಡದು.

---

[1] (ಹಳ) ವನ (ಅನ್ಯತ್ರ)
[2] (ಚ) ನೆಲ್ಲರನೊಂದೆ (ಅನ್ಯತ್ರ)
[3] (ಹಳ) ರೆ (ಅನ್ಯತ್ರ)

ಗೋತ್ರನಾಮವ ಬೆಸಗೊಂಡರೆ
ಮಾತ ನೂಂಕದೆ ಸುಮ್ಮ 'ನಿದ್ದಿರಿದೇಕಯ್ಯ'?!
ತಲೆಯ ಕುತ್ತಿ ನೆಲನ ಬರವುತಿದ್ದಿರಿದೇನಯ್ಯ ? ?
ಗೋತ್ರ ಮಾದಾರ ಚೆನ್ನಯ್ಯ
ಡೋಹಾರ ಕಕ್ಕಯ್ಯನೆಂಬುದೇನು ?!
ಕೂಡಲಸಂಗಯ್ಯ.

85

ಶಂಕರ-ಗಿರಿಜಾಕಲ್ಯಾಣದ ಸಂದರ್ಭದಲ್ಲಿ ಗೋತ್ರವಾವುದೆಂದು ತನ್ನನ್ನು ಪ್ರಶ್ನಿಸಿದಾಗ—ಸ್ವಯಂಭುವಾದ ಶಂಕರನು ಉತ್ತರ ಹೊಳೆಯದೆ ತಲೆತಗ್ಗಿಸಿ ನೆಲಬರೆಯುತ್ತ ನಿಂತಿದ್ದನೆಂಬ ಕಥಾಪ್ರಸಂಗವೊಂದು ಶಿವಪುರಾಣಗಳಲ್ಲಿ ಉಂಟು. ಅದರ ಹಿನ್ನೆಲೆಯಲ್ಲಿ ಈ ವಚನ ರಚಿತವಾಗಿದೆ. ಅಸ್ಪೃಶ್ಯರ ದೀನದಲಿತರ ಅಭಿಮಾನಿಗಳಾದ ಬಸವಣ್ಣನವರು ಶಿವನಿಗೆ ಹೇಳುತ್ತಾರೆ—ಕಾಶ್ಯಪ ಕೌಂಡಿನ್ಯಾದಿ ಬ್ರಹ್ಮವಿತ್ತುಗಳ ಹೆಸರೆತ್ತಿ ಗೋತ್ರ ಹೇಳುವುದೇನು ದೊಡ್ಡದು ?! ಆ ಗೋತ್ರಪ್ರವರ್ತಕಮಹರ್ಷಿಯರಿಗೂ ಸರಿಮಿಗಿಲಾದ ನಮ್ಮ ಮಾದಾರ ಚೆನ್ನಯ್ಯ-ಡೋಹಾರ ಕಕ್ಕಯ್ಯಗಳ ಹೆಸರೆತ್ತಿ ನಿನ್ನ ಗೋತ್ರವನ್ನು ಹೇಳಿಕೋ! ಅವರಿಂದ ಭೂಮಿಯಲ್ಲಿ ಪ್ರಾಚೀನ ಆದರೂ ಒಂದು ನೂತನ ಭವ್ಯ ಶಿವಕುಲ ಪ್ರವರ್ತಿತವಾಗಿದೆ—ಎಂದು.

---

[1] (ಹಳೆ) ನಿದ್ದಿಕಯ್ಯ (ನಿ) ನಿದ್ದಿರಿದೇನಯ್ಯ (ಸ)

ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ !
ಜಲ-ಬಿಂದುವಿನ ವ್ಯವಹಾರ ಒಂದೇ,
ಆಶೆಯಾಮಿಷ ಹರುಷ ರೋಷ ವಿಷಯಾದಿಗಳೆಲ್ಲ ಒಂದೇ!
ಏನನೋದಿ, ಏನ ಕೇಳಿ, ಏನು ಫಲ ?
ಕುಲಜನೆಂಬುದಕ್ಕೆ ಆವುದು ದೃಷ್ಟ ?

ಗ್ರಂಥ:

ಸಪ್ತಧಾತುಸಮಂ ಪಿಂಡಂ ಸಮಯೋನಿ ಸಮುದ್ಭವಂ
ಆತ್ಮ ಜೀವಸಮಾಯುಕ್ತಂ ವರ್ಣಾನಾಂ ಕಿಂ ಪ್ರಯೋಜನಂ ॥

ಎಂದುದಾಗಿ

ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ,
ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ !
ಕರ್ಣದಲ್ಲಿ ಜನಿಸಿದವರುಂಟೇ ಜಗದೊಳಗೆ ?

ಇದು ಕಾರಣ ಕೂಡಲಸಂಗಮದೇವ,
ಲಿಂಗಸ್ಥಲವನರಿದವನೇ ಕುಲಜನು ! 86

ಯಾವ ಮಾನವಜೀವಪಿಂಡವಾಗಲಿ ಗರ್ಭದಲ್ಲಿ ನೆಲೆನಿಲ್ಲುವುದಕ್ಕೆ ಮುನ್ನ ಮುಟ್ಟು ಕಂಡಿರಬೇಕು. ಅದು ಮೊತ್ತಮೊದಲಿಗೆ ರೂಪಗೊಳ್ಳುವಲ್ಲಿ ಶುಕ್ಲ ರೇತೋವ್ಯವಹಾರಗಳೆಲ್ಲಾ ಎಲ್ಲಕ್ಕೂ ಒಂದೇ! ಆ ಪಿಂಡಸ್ಥವಾದ ಆಶೆ ರೋಷ ಮುಂತಾದ ಸಹಜಸ್ವಭಾವಗಳೆಲ್ಲಾ ಎಲ್ಲರಿಗೂ ಸಮಾನ ! ಮತ್ತೆ ಏನನ್ನು ಕಂಡು, ನಾವು ಒಬ್ಬನನ್ನು ಉತ್ತಮಕುಲದವನೆನ್ನುತ್ತೇವೆ? ಬ್ರಾಹ್ಮಣ–ಕ್ಷತ್ರಿಯ–ವೈಶ್ಯ-ಶೂದ್ರ ಎಂದು ವಿಂಗಡಿಸಿ ಏಕೆ ತಾರತಮ್ಯ ಮಾಡುತ್ತೇವೆ ? ಓದಿ ವಿವೇಕಿಗಳೆನಿಸಿಕೊಂಡವರೂ ಈ ಚತುರ್ವರ್ಣ ಸಂಪ್ರದಾಯವನ್ನೇ ಅಂಧವಾಗಿ ಅನುಕರಿಸುತ್ತಿರುವುದು ಆಶ್ಚರ್ಯ !

ಕಬ್ಬಿಣವನ್ನು ಕಾಸಿ ಒಬ್ಬನು ಕಮ್ಮಾರನೆನಿಸಿಕೊಂಡ, ಬಟ್ಟೆಯನ್ನು ಬೀಸಿ ಒಗೆದು ಇನ್ನೊಬ್ಬನು ಮಡಿವಾಳನೆನಿಸಿಕೊಂಡ, ಹಾಸನ್ನು ಮತ್ತೊಬ್ಬ ಹಾಕಿ ನೆಯ್ಗೆಯವನಾದ, ಹಾರುವನೆಂಬುವನಾದರೋ ಹೇಗಾದ ? ವೇದವನ್ನು ಓದುವ ಕೆಲಸವನ್ನು ಮಾಡಿ! ಸಮಾಜವ್ಯವಸ್ಥೆಗೆ ಇಂತಹ ಅನೇಕರ ಅನೇಕ ವಿಧವಾದ ಕಾರ್ಯಗಳೂ ಸಮಾನಾವಶ್ಯಕವಾಗಿರುವಾಗ, ಅವನವನು ಹಿಡಿದ ಕಾರ್ಯಕ್ಕೆ ಜಾತಿಯನ್ನ ತೊಡಕಿಸಿ, ಅವುಗಳಲ್ಲಿ ಕೆಲವನ್ನು ಮೇಲು, ಕೆಲವನ್ನು ಕೀಳು ಎನ್ನುವುದು ಹೀನತನ. ಬ್ರಾಹ್ಮಣನೇನು ಕಿವಿಯಲ್ಲಿ ಹುಟ್ಟಿದನೇ ? ಅವನೂ ಎಲ್ಲರಂತೆ ಯೋನಿಜ, ಆತ್ಮ–ಜೀವ ಸೇರಿ ಆದವ. ರಕ್ತಮಾಂಸ ಮಿಕ್ಕೆಲ್ಲ ಸಮ. ಮತ್ತೆ, ಈ ಚಾತುರ್ವರ್ಣ್ಯವಿಭಾಗದಿಂದ ಅನೈಕಮತ್ಯವಲ್ಲದೆ ಪ್ರಯೋಜನವೇನು? ಉತ್ತಮ ಕುಲವೆನ್ನುವುದೊಂದು ಇರುವುದಾದರೆ, ಅದಕ್ಕೆ ಗುರುತಿನ ಚೀಟಿ ಪರಶಿವನಲ್ಲಿ ಪ್ರಜ್ಞೆ! ಅಂಥವನೊಬ್ಬನೇ ಕುಲೀನ, ಮಿಕ್ಕವರೆಲ್ಲರು ಕುಲಹೀನರು.

ಉಂಬಲ್ಲಿ ಉಡುವಲ್ಲಿ ಕ್ರೀಯಳಿಯಿತ್ತೆಂಬರು |
ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರು !
ಎಂತಯ್ಯ ? ಅವರ[1]ಭಕ್ತರೆಂತೆಂಬೆ[1] ?
[2]ಎಂತಯ್ಯ?[2] ಅವರ [3]ಯುಕ್ತರೆಂತೆಂಬೆ[3] ?
ಕೂಡಲಸಂಗಮದೇವ ಕೇಳಯ್ಯ
ಹೊಲತಿ ಶುದ್ಧನೀರ ಮಿಂದಂತಾಯಿತ್ತಯ್ಯ ! 87

ಶಿವಕುಲವೆಲ್ಲ ಒಂದೇ ಆದರೂ, ಅವರಲ್ಲಿ ಕೀಳು-ಮೇಲಿನ ವಿವಂಚನೆ ಸರಿಯಲ್ಲ ವೆಂದು ಆಗಮಪುರಾಣಗಳು ಆಗ್ರಹಗೊಂಡಿದ್ದರೂ, ಶಿವಭಕ್ತರೆನಿಸಿಕೊಂಡ ಕೆಲವರು, ತಮ್ಮ ತಮ್ಮಲ್ಲೇ ಊಟ ಉಪಚಾರ ಮಾಡಿದರೆ ಕ್ರಿಯೆ ತಪ್ಪಿತೆನ್ನುವರು, ಕೊಟ್ಟು-ತರುವುದರಿಂದಲಂತೂ ಕುಲವೇ ಕೆಡುವುದೆನ್ನುವರು ! ಅದು ಏತರ ಭಕ್ತಿ ? ಅವರು ಏತರ ಭಕ್ತರು ? ಸಮಾನದರ್ಶನವಿಲ್ಲದ ಸುಳ್ಳುಶಿವಭಕ್ತರವರು ! ಶುದ್ಧಶಿವಕುಲದಲ್ಲಿ ಕಳಂಕಸದೃಶರವರು. ಅಂತಹವರ ಸಂಸರ್ಗದಿಂದ ಪವಿತ್ರಶಿವಕುಲವೂ ಅಪವಿತ್ರ ವಾಗುವುದು—ಹೊಲತಿಯು ಮಿಂದು, ಶುದ್ಧವಾದ ನೀರನ್ನು ಹೊಲೆಗೊಳಿಸಿದ ಳೆಂಬಂತೆ !

---

[1] ಭಕ್ತರೆಂಬೆ (ಸ)
[2] × ಜ
[3] ಯುಕ್ತರೆಂಬೆ (ಸ)

ಸೆಟ್ಟಿ [1]ಎಂಬೆನೇ[1] ಸಿರಿಯಾಳನ ?
ಮಡಿವಾಳನೆಂಬೆನೇ[2] ಮಾಚಯ್ಯನ?
ಡೋಹಾರನೆಂಬೆನೇ[2] ಕಕ್ಕಯ್ಯನ ?
ಮಾದಾರನೆಂಬೆನೇ[2] ಚೆನ್ನಯ್ಯನ ?
[3][ನಾನು][3] ಹಾರುವನೆಂದರೆ ಕೂಡಲಸಂಗಯ್ಯ ನಗುವನಯ್ಯಾ ! 88

ಸೆಟ್ಟಿ, ಮಡಿವಾಳ, ಡೋಹಾರ, ಮಾದಾರ–ಎಂದು ಏಕೆ ಜನತೆಯನ್ನು ಹೀನಗಳೆಯುವಿರಿ? ಅವರಲ್ಲಿ, ಸಮಾಜಹಿತಕ್ಕಾಗಿ ದುಡಿಯುವ ಕಳಕಳಿ-ಮಿಡುಕಿಲ್ಲವೆ? ಆಧ್ಯಾತ್ಮಿಕವಾಗಿ ಜಾಜ್ವಲ್ಯಮಾನವಾಗುವ ದೈವಾಂಶದ ನಿಗಿನಿಗಿ ಕಿಡಿಯಿಲ್ಲವೆ? ನೋಡಿ! ತನ್ನ ಸದ್ಗತಿಗೆ ಹೆದ್ದಾರಿಯಾಗಿದ್ದ ಪ್ರಿಯ ಪುತ್ರನನ್ನೇ ಜಂಗಮಲಿಂಗಕ್ಕರ್ಪಿಸಲಿಲ್ಲವೇ ಸಿರಿಯಾಳ ಸೆಟ್ಟಿ ? ಅವನನ್ನು ಕೇವಲ ಸೆಟ್ಟಿಯೆನ್ನುವಿರಾ ? ಸಮಾಜದ ಮೈಲಿಗೆಯನ್ನು ತೊಳೆದು ಥಳಥಳ ಮಾಡಲಿಲ್ಲವೆ ಮಾಚಯ್ಯ ಮಡಿವಾಳ? ಅವನನ್ನು ಕೇವಲ ಮಡಿವಾಳನೆನ್ನುವಿರಾ ? ತನ್ನ ಶಿವನಿಷ್ಠೆಯಿಂದ ಸುತ್ತೆಲ್ಲವನ್ನೂ ಶಿವಮಯವಾಗಿಸಲಿಲ್ಲವೆ ಕಕ್ಕಯ್ಯ ಡೋಹಾರ ? ಅವನನ್ನು ಕೇವಲ ಡೋಹಾರನೆನ್ನುವಿರಾ? ಶಿವನ ಗುಪ್ತಭಕ್ತಿಯಲ್ಲಿದ್ದು ಜೀವ ಹಣ್ಣಾಗುವವರೆಗೆ ಸಕಲಜೀವಲೋಕದ ಸೇವೆ ಮಾಡಿಕೊಂಡಿರಲಿಲ್ಲವೆ ಚೆನ್ನಯ್ಯ ಮಾದಾರ? ಅವನನ್ನು ಕೇವಲ ಮಾದಾರನೆನ್ನುವಿರಾ? ಇವರೆಲ್ಲ ಮಾನವಮಹಾದೇವರಲ್ಲವೆ! ಇಂಥವರೆಲ್ಲ ಕೀಳು, ಹಾರುವನೊಬ್ಬನೇ ಮೇಲೆಂದರೆ–ನಮ್ಮ ಮೌಢ್ಯಕ್ಕೆ ದೇವರು ಗಹಗಹಿಸುವನು.

ಪೂರ್ವಾಶ್ರಮದಲ್ಲಿ ಹಾರುವರಾಗಿದ್ದ ಬಸವಣ್ಣನವರಿಂದ—ತಮಗೇ ಅನ್ವಯಿಸಿಕೊಂಡು —ಬಂದಿರುವ ಈ ಮಾತು ಅತೀವ ಅರ್ಥಪೂರ್ಣ.

---

[1] ಎಂದೆಂಬೆನೆ (ಸ)
[2] ನೆಂದೆಂಬೆನೆ (ಸ)
[3] ಆನು (ಸರ್ವತ್ರ)

ವ್ಯಾಸ ಬೋಯಿತಿಯ ಮಗ!
ಮಾರ್ಕಂಡೇಯ ಮಾತಂಗಿಯ ಮಗ!
ಮಂಡೋದರಿ ಕಪ್ಪೆಯ ಮಗಳು!
ಕುಲವನರಸದಿರಿ ಭೋ!
ಕುಲದಿಂದ ಮುನ್ನೇನಾದಿರಿ ಭೋ:
ಸಾಕ್ಷಾದಗಸ್ತ್ಯ ಕಬ್ಬಿಲ, ದುರ್ವಾಸ ಮುಚ್ಚಿಗ,
ಕಶ್ಯಪ ಕಮ್ಮಾರ, ಕೌಂಡಿನ್ಯನೆಂಬ ಋಷಿ
ಮೂರು ಲೋಕವರಿಯೆ ನಾವಿಂದ ಕಾಣಿ ಭೋ
ನಮ್ಮ ಕೂಡಲಸಂಗನ ವಚನವಿಂತೆಂದುದು:
"ಶ್ವಪಚೋಪಿಯಾದರೇನು ಶಿವಭಕ್ತನೇ ಕುಲಜಂ ಭೋ!" 89

ವೇದಕಾಲಕ್ಕೆ ಹಿಂದೂಧರ್ಮದಲ್ಲಿ ಕಾಯಕದ ಆಧಾರದ ಮೇಲಿಂದ ವರ್ಣ ವ್ಯವಸ್ಥೆಯಿದ್ದಿತಾದರೂ, ಒಂದು ವರ್ಣ( =ಜಾತಿ) ಮತ್ತೊಂದಕ್ಕಿಂತ ಕೀಳೆಂದಾಗಲಿ ಮೇಲೆಂದಾಗಲಿ ಅತೀವ ಘರ್ಷಣೆಯಿರಲಿಲ್ಲ. ಆದರೆ ಅಲ್ಲಿಂದೀಚಿನ ಅವನತಿಯ ಕಾಲಕ್ಕೆ ಪ್ರಥಮ ವರ್ಣವೇ ಉತ್ತಮ, ಚತುರ್ಥವರ್ಣ ಅಧಮ, ಪಂಚಮ [+ವರ್ಣ] ಅಸ್ಪೃಶ್ಯ ಎಂದು ಸಮಾಜ ಭಿನ್ನಭಿನ್ನವಾಗಿ ವ್ಯಾಕುಲಕ್ಕೊಳಗಾಯಿತು. ಉತ್ತಮ ಕುಲದವರಿಂದಲೇ ಲೋಕೋದ್ಧಾರವೆಂಬ ಮಿಥ್ಯಾಕಲ್ಪನೆ ಹಬ್ಬಿತು. ಈ ಮುಸುಕಿನಲ್ಲಿ ಉತ್ತಮ ಕುಲದವರು ಉಂಡುಟ್ಟು ಸ್ವಾರ್ಥದಲ್ಲಿ ವಿಜೃಂಭಿಸಿದರು. ಗರ್ಹಿತರಾದ ದಲಿತವರ್ಗದವರು ತಾವು ನಿರ್ಭಾಗ್ಯರೆಂದೂ, ನಿಶ್ಯಕ್ತರೆಂದೂ, ತಮ್ಮಿಂದೇನೂ ಊರ್ಜಿತವಾಗಲಾರದೆಂದೂ ಎದೆಗೆಟ್ಟು ಕಂಗೆಟ್ಟು ಮೂಲೆ ಗುಂಪಾದರು. ಹೀಗೆ ಸಮಾಜದ ಉದ್ಧಾರ ಸ್ಥಗಿತವಾಯಿತು. ಆ ವಿಷಮ ವೇಳೆಯಲ್ಲಿ ಶೀಲದಿಂದಲ್ಲದೆ, ಕುಲದಿಂದ ಮಾತ್ರ ಹಿರಿಯರೆನಿಸಿಕೊಂಡವರನ್ನು ಮೂದಲಿಸಿ ಜನತೆಯ ತಿರುಳಿನಂತಹ ದಲಿತವರ್ಗವನ್ನು ಹುರಿದುಂಬಿಸುತ್ತಿರುವರು ಬಸವಣ್ಣನವರು ಈ ವಚನದ ಮೂಲಕ.

ಪುರಾಣ–ಇತಿಹಾಸ–ವೇದಾಂತಸೂತ್ರಗಳ ಪ್ರಥಮಪ್ರವರ್ತಕನಾದ ವ್ಯಾಸ, ಮೃತ್ಯುವನ್ನು ಪರಾಭವಗೊಳಿಸಿ ಅಮೃತಪುತ್ರನಾದ ಮಾರ್ಕಂಡೇಯ, ಪತಿವ್ರತಾ ಶಿರೋಮಣಿಯಾದ ಮಂಡೋದರಿ, ಸಾಹಸಿಯಾದ ಅಗಸ್ತ್ಯ, ದಕ್ಷನಾದ ದೂರ್ವಾಸ, ಸಂಪನ್ನನಾದ ಕಶ್ಯಪ, ದಕ್ಷನಾದ ಕೌಂಡಿನ್ಯ–ಇವರಾರೂ ಉತ್ತಮ ಕುಲದಲ್ಲಿ ಹುಟ್ಟಿದವರಲ್ಲ! ಬೋಯಿ, ಬೇಡ-ಚಮ್ಮಾರ-ಕಮ್ಮಾರ ಮುಂತಾದ ಕೀಳೆಂದು ಪರಿಗಣಿಸ

ಲಾದ ಕುಲದಲ್ಲಿ ಹುಟ್ಟಿದವರು!! ಆದರೂ ಅವರು ತಮ್ಮ ಶಿವಭಕ್ತಿಶೀಲದಿಂದ ಸರ್ವರಿಂದಲೂ ಸನ್ಮಾನಿತರಾದರು. ಅವರಿಗೆ ಗೌರವಪೂಜ್ಯತೆಗಳು ಸಂದುದು ವಿಚಾರಕ್ಕೆ ತತ್ತರಿಸುವ ಕುಲ-ಜಾತಿಭ್ರಮೆಯಿಂದಲ್ಲ. ವಿಚಾರದಿಂದ ಮತ್ತಷ್ಟು ರೂಢಮೂಲವಾಗುವ ಸದಾಚರಣೆಗಳಿಂದ. ಆದುದರಿಂದಲೇ–ಬಸವಣ್ಣನವರು "ಕುಲವನರಸದಿರಿ ಭೋ"ಎಂದು ಘೋಷಿಸಿ,ಉತ್ತಮ ಕುಲದಲ್ಲಿ ಹುಟ್ಟಿದ ಮಾತ್ರಕ್ಕೇ ಯಾರೂ ಯಾವ ಮಹಾತ್ಕಾರ್ಯವನ್ನೂ ಸಾಧಿಸಿಲ್ಲವೆಂದು ಎಚ್ಚರಿಸಿದರು. ಯಾವನಾವರೊಬ್ಬನು ಹುಟ್ಟನಿಂದ ಶ್ವಪಚನಾದರೆ ತಾನೇ ಏನು? ಅವನನ್ನು ಕುಲಜನನ್ನಾಗಿ ಮಾಡುವ ಮಹದಂಶವೆಂದರೆ ದೈವಭಕ್ತಿ ಮತ್ತು ಲೋಕ ಕಾರುಣ್ಯ! ಇದನ್ನು ಉಚ್ಚವರ್ಗದವರು ಮರೆಯಬಾರದೆಂದರು.

ಕುಲಮದಕ್ಕೆ ಹೋರಿ ಜಂಗಮಭೇದವ ಮಾಡುವೆ !
ಫಲವೇನು ? ನಿತ್ಯಾಲಿಂಗಾರ್ಚನೆ ಪ್ರಾಯಶ್ಚಿತ್ತ !
ಛಲಮದಕ್ಕೆ ಹೋರಿ 'ಲಿಂಗ'ಭೇದವ ಮಾಡುವೆ
ಜಂಗುಳಿಯ ಕಾವ ಗೋವಳ ಹಲವು ಪಶುವ [2]ನಿವಾರಿಸುವಂತೆ[2] !
ತನುಭಕ್ತನಾಯಿತ್ತೆನ್ನ ಮನ ಭವಿ !
ಕೂಡಲಸಂಗಮದೇವ !

90

ಯಾವನಾದರೂ ನಿಷ್ಠೆಯೊಂದಿದ್ದರೆ ವೀರಶೈವನಾಗಬಹುದು, ಯಾವ ವೀರಶೈವ ನಾಗಲಿ ಲೋಕಹಿತಾಕಾಂಕ್ಷಿಯಾಗಿದ್ದರೆ ಜಂಗಮನಾಗಬಹುದು. ಈ ಸಂಪ್ರದಾಯವು ಕಡೆಯ ಪಕ್ಷ ಬಸವಣ್ಣನವರ ಕಾಲದಿಂದಲೂ ಪ್ರಚಲಿತವಿದೆ. ಆದರೆ ಇದನ್ನು ಒಪ್ಪದ ಸಂಪ್ರದಾಯಮೂಢರನ್ನು ಬಸವಣ್ಣನವರು ಈ ತಮ್ಮ ವಚನದಲ್ಲಿ ಕಟುವಾಗಿ ಟೀಕಿಸಿ, ಜಾತಿಭೇದವನ್ನೇ ಅಲ್ಲಗಳೆದ ವೀರಶೈವ ಧರ್ಮದ ಅನುಯಾಯಿಗಳೆನಿಸಿಕೊಂಡವರು ಕೆಲವರು ಜಾತಿಯ ಆಧಾರದ ಮೇಲೆ ಶಿವಭಕ್ತರಲ್ಲೇ ತಾರತಮ್ಯ ತೋರುವುದನ್ನು ಪ್ರತಿಭಟಿಸಿರುವರು.

ಅನ್ಯರಲ್ಲಿ ಇರುವ ಗುಣಗಳನ್ನು ಕುರುಡುಕಾಣುವ, ಮತ್ತು ತನ್ನಲ್ಲಿ ಇಲ್ಲದ ಗುಣಗಳನ್ನು ಅತಿಶಯಿಸಿ ಕಾಣುವ ವಿಚಿತ್ರ ಪೈತ್ಯಭಾವವೇ ಅಹಂಕಾರವೆನ್ನುವುದು, ಇಂತಹ ಅಹಂಕಾರ ಉಳ್ಳವನಿಗೆ ಜಂಗಮದಲ್ಲಾಗಲಿ, ಲಿಂಗದಲ್ಲಾಗಲಿ ಗೌರವವಿಲ್ಲ. ಜಗದ್ಧಿತಕ್ಕಾಗಿ ಸದಾಚಾರವನ್ನು ಕೈಗೊಂಡು, ಅದಕ್ಕಾಗಿಯೇ ತನ್ನ ತನು-ಮನ-ಧನ ಗಳನ್ನು ತೇಯುತ್ತಿರುವ ಜಂಗಮಮೂರ್ತಿಯಲ್ಲಿ ಅಹಂಕಾರಿಗೆ ಕಾಣುವ ಕುತೂಹ ಲಾಂಶವೆಂದರೆ—ಆ ಜಂಗಮನು ಪೂರ್ವಾಶ್ರಮದಲ್ಲಿ ಯಾವ ಜಾತಿಯವನಾಗಿದ್ದನೆ. ಬುದು. ಆ ಅಹಂಕಾರಿಗೆ ಜಂಗಮನ ಜಾಗೃತಿ-ಸಾಧನೆ-ಸಿದ್ಧಿಗಳ ಕಡೆಗೆ ಗಮನವೇಇಲ್ಲ

ಅಂತಹ ಅಹಂಕಾರಿಯು ಉತ್ತಮಕುಲೋತ್ಪನ್ನನಾದರೂ, ಜಂಗಮದೂಷಕ ನಾದ ಅವನು ಮಾಡುವ ಲಿಂಗಪೂಜೆಯು, ಮಾಡಿದ ಜಂಗಮದೂಷಣೆಗೆ ಪ್ರಾಯ ಶ್ಚಿತ್ತರೂಪವಾಯಿತೇ ಹೊರತು, ಪುಣ್ಯಕಾರಿಯಾಗಲಿಲ್ಲ. ಜೊತೆಗೆ ಅವನು ಲಿಂಗ ದೂಷಕನೂ ಆಗಿ: "ನಾನು ಇಷ್ಟಲಿಂಗ ಪೂಜಕ, ಸ್ಥಾವರಲಿಂಗವನ್ನು ಪೂಜಿಸುವು ದಿಲ್ಲ"ವೆಂದು ಲಿಂಗದೂಷಣೆಯನ್ನೂ ಮಾಡಿಯಾನು. ನಿರಹಂಕಾರಕ್ಕೆ ಪ್ರತೀಕವಾದ ಲಿಂಗದಲ್ಲಿ ಮತ್ತು ತ್ಯಾಗ-ದುಡಿಮೆಗಳಿಗೆ ಪ್ರತೀಕವಾದ ಜಂಗಮದಲ್ಲಿ ಹೀಗೆ ವಿಶ್ವಾಸ ವಿಲ್ಲದವನು ಎಂಥ ಕುಲೀನನೆನಿಸಿಕೊಂಡರೇನು ? ಅವನು ಮಹಾಹೀನ. ದನಕಾಯು ವವನು ದನಗಳನ್ನು ಆ ಬಣ್ಣ ಈ ಬಣ್ಣವೆಂದು ಗುರುತಿಸುವಂತೆ, ಮಹತ್ತಿನಲ್ಲಿ ತರ ತಮವೆಣಿಸುವವನು ಶಿವಭಕ್ತನಲ್ಲ. ವಿಭೂತಿ ಮುಂತಾದ ಶಿವಲಾಂಛನಗಳಿಂದ ಅವನ ದೇಹ ಶಿವಭಕ್ತನಂತೆ ಕಂಡರೂ, ಅವನ ಮನಸ್ಸು ಅಚ್ಚಭವಿಯಾಗಿರುವುದು.

[1] ಜಂಗಮ (ನಿ) [2] ನಿವಾಡಿಸುವಂತೆ (ಸ) ನಿವಾರಿಸುವಂತೆ (ನಿ) (ಕ) (ಚ) (ಹಳ)

ನೆಲನೊಂದೇ ಹೊಲೆಗೇರಿ ಶಿವಾಲಯಕ್ಕೆ !
ಜಲವೊಂದೇ ,ಶೌಚಾಚಮನಕ್ಕೆ[1] !
ಕುಲವೊಂದೇ ತನ್ನ ತಾನರಿದವಂಗೆ !
ಫಲವೊಂದೇ ಷಡುದರ್ಶನಮುಕ್ತಿಗೆ !
ನಿಲವೊಂದೇ, ಕೂಡಲಸಂಗಮದೇವ,
[2]ನಿಮ್ಮನರಿದವಂಗೆ ! — 91

ಉತ್ತಮ ಅಥವಾ ಅಧಮ ಆಚರಣೆಗಳ ಆಧಾರದಿಂದಲ್ಲದೆ ಹೇಗೂ ಯಾರನ್ನಾಗಲಿ ಉತ್ತಮ–ಅಧಮನೆಂದು ನಿರ್ಣಯಿಸಲಾಗದು. ಒಂದೇ ನೆಲವಾದರೂ ಅಲ್ಲಿ ಶಿವಾಲಯವನ್ನು ಕಟ್ಟಿದರೆ ಪುಣ್ಯಕ್ಷೇತ್ರವಾಗಿ, ದುರಾಚಾರಿಗಳು ನೆಲೆಸಿದರೆ ಹೊಲೆಗೇರಿಯಾಗುವುದು. ಹಾಗೆಯೇ ಒಂದೇ ಜಲವು–ಮೀಯಲು ಕುಡಿಯಲು ಬಳಕೆಯಾದರೆ ತೀರ್ಥವೆನಿಸಿ, ಶೌಚಕ್ಕೆ ಬಳಕೆಯಾದರೆ ಕೊಳಕೆನಿಸುವುದು. ಈ ನೆಲ–ಜಲಗಳಂತೆ ಒಂದೇ ಮಾನವಕುಲವು ಜ್ಞಾನದಿಂದ ಉತ್ತಮವೆನಿಸಿ, ಅಜ್ಞಾನದಿಂದ ಅಧಮವೆನಿಸುವುದಲ್ಲದೆ, ಯಾವುದಾದರೊಂದು ಕುಲದಲ್ಲಿ ಹುಟ್ಟಿದ ಮಾತ್ರದಿಂದಲೇ ಪಾವನವಾಗಲಿ ಪಾಪಿಯಾಗಲಿ ಆಗುವುದು ಸಾಧ್ಯವಿಲ್ಲ. ಮತ್ತು ಜ್ಞಾನಿಯಾದವನಿಗೆ ಸಮದರ್ಶಿತ್ವವಿರುವುದರಿಂದ ಕುಲ(ಜಾತಿ)ಗಳಲ್ಲಿ ಇದು ಮೇಲು ಅದು ಕೀಳೆನ್ನುವುದಿಲ್ಲದೆ–ಎಲ್ಲ ಕುಲ(ಜಾತಿ)ಗಳೂ ಅವನಿಂದ ಸಮಾನವಾಗಿ ಸನ್ಮಾನಿಸಲ್ಪಡುವವು. ಬೇರೆಬೇರೆ ಕುಲಕ್ಕೆ ಬೇರೆಬೇರೆ ದರ್ಶನ – ಸಿದ್ಧಾಂತವಿರಬಹುದು, ಆದರೆ ಎಲ್ಲ ದರ್ಶನಗಳ ಗುರಿಯೂ ಮುಕ್ತಿಯೇ ಆಗಿರುವುದು. ಕೊನೆಯದಾಗಿ ದೇವರ ಉಪಾಸನೆಯಿಂದ ಉದ್ಧಾರವಾದ ಎಲ್ಲ ಮುಕ್ತಾತ್ಮರ ಆನಂದಸ್ಥಿತಿಯೂ ಒಂದೇ ಆಗಿರುವುದು.

ಹೀಗಿರುವಲ್ಲಿ ಜಾತಿಗಳ ಆಧಾರದ ಮೇಲಿಂದ ಜನರನ್ನು ಮೇಲು ಕೀಳೆಂದು ವಿಂಗಡಿಸುವ ದುಷ್ಟ ಪದ್ಧತಿಯನ್ನು ಬಸವಣ್ಣನವರು ಖಂಡಿಸಿ, ಕುಲವು ಕುಲವಲ್ಲ, ಸದಾಚಾರವೇ ಕುಲವೆಂದು ಮತ್ತೆ ಮತ್ತೆ ಸಾರಿರುವರು.

"ಅರಿತರೆ ಶರಣ, ಮರೆತರೆ ಮಾನವ'' ಎಂಬ ಬಸವಣ್ಣನವರ ಮಾತು ಕಾಲ-ದೇಶ ಜಾತಿ-ಭೇದವಿಲ್ಲದೆ ಎಲ್ಲಮಾನವವರ್ಗಕ್ಕೂ ಇಡಿಯಾಗಿ ಅನ್ವಯಿಸುವ ಸುವರ್ಣಸೂತ್ರ

[1] ಶೌಚಮಜ್ಜನಕ್ಕೆ (ಏ) (ಸ).
[2] ನಿಮ್ಮನರಿದ ಶರಣಂಗೆ (ಚ).

ಹಬ್ಬಕ್ಕೆ ತಂದ ಹರಕೆಯ ಕುರಿ
ತೋರಣಕ್ಕೆ ತಂದ ತಳಿರ ಮೇಯಿತ್ತು!
ಕೊಂದಹರೆಂಬುದನರಿ ಯದೆ
ಬೆಂದೊಡಲ ಹೊರೆವುತ್ತಲಿದೆ!
'ಅದಂದೆ' ಹುಟ್ಟಿತ್ತು! 'ಅದಂದೆ ಹೊಂದಿತ್ತು!
ಕೊಂದವರುಳಿವರೆ ಕೂಡಲಸಂಗಮದೇವ?!

92

ಜನ ತಮ್ಮ ಹಬ್ಬ ಹರಿದಿನಕ್ಕೆಂದು ಕುರಿ–ಮೇಕೆಗಳನ್ನು ಬಲಿ ಕೊಡುವ ಕೃತ್ಯದಲ್ಲಿ ಬಸವಣ್ಣನವರಿಗೆ ಇಡೀ ಮಾನಕೋಟಿಯು ಯಮನ ಮನೆಯ ಹಬ್ಬಕ್ಕೆ ಬಲಿಯಾಗುತ್ತಿರುವ ವಿಚಿತ್ರ ಕಣ್ಣಿಗೆ ಕಟ್ಟಿತು.

ಯಾರದೋ ಹಬ್ಬಕ್ಕೆ, ಯಾರೋ ಬಲಿ! ಕೊನೆಗೆ ಸಾವಿಗೆ ಸರ್ವರೂ ಬಲಿ! ಹೀಗಿದ್ದರೂ ಈ ಜೀವನದ ನಶ್ವರತೆಯನ್ನು ಮನಗಾಣದೆ ಜನ ತಮ್ಮ ಸ್ವಂತ ಸುಖಭೋಗಕ್ಕಾಗಿ ಅನ್ಯಜೀವನಜಾಲವನ್ನು ಬಳಸಿ, ಅವನ್ನು ಬಲಿ ತೆಗೆದುಕೊಳ್ಳುತ್ತ ತಮ್ಮ ಲಂಪಟತನದ ರಭಸವನ್ನು ಉಕ್ಕೇರಿಸುತ್ತಲೇ ಬಂದಿರುವರು.

ಹಬ್ಬಕ್ಕಾಗಿ ತಂದ ಹರಕೆಯ ಕುರಿ, ಇನ್ನೊಂದು ಘಳಿಗೆಗೆ ತನ್ನನ್ನು ಕೊಲ್ಲುವರೆಂಬುದನ್ನು ಅರಿಯದೆ, ತನ್ನೊತ್ತಿನಲ್ಲೇ ನಳನಳಿಸುವ ತೋರಣದ ತಳಿರನ್ನು ಎಳೆದು ಮೆಲ್ಲುತ್ತಿರುವುದು! ಆ ಘಳಿಗೆಯಲ್ಲೇ, ಅತ್ತ, ಜನ ಅದರ ಕೊರಳನ್ನು ಕೊಯ್ಯಲು ಚೂರಿಯನ್ನು ಕಲ್ಲಿಗೆ ತಿಕ್ಕಿ ಹರಿತ ಮಾಡುತ್ತಿರುವರು! ಆ ಚೂರಿ ಅದರ ನುಣ್ಗೊರಲ ಮೇಲೂರಿ ಕೆನ್ನೆತ್ತರನ್ನು ಚಿಮ್ಮಿಸುವುದು ಇನ್ನೊಂದು ಕ್ಷಣವೋ ಅರೆಕ್ಷಣವೋ! ಆದರೂ ಅದು ಅಲ್ಲಿಂದ ಪಾರಾಗುವತ್ತ ಯೋಚನೆ ತಿರುಗಿಸಲಾರದೆ, ಚಿಗುರು ಹೂವುಗಳತ್ತಲೇ ದತ್ತಾವಧಾನವಾಗಿ ಮೈಮರೆತಿರುವುದು.

ಈ ಮಾನವನಾದರೂ ಆ ಕುರಿಗಿಂತ ಹೇಗೂ ಮೇಲೆಂದು ತೋರುವುದಿಲ್ಲ. ಅವನು ಜೀವನದ ಲಾಲಸೆಗಳತ್ತ ಮನ ತೆತ್ತು ಆತ್ಮೋದ್ಧಾರದ ಯೋಚನೆಯನ್ನು ಮನದತ್ತ ತರಲಾರದವನಾಗಿರುವನು. ಹೆಡತಲೆಯ ಸಾವು ಅವನನ್ನು ಇಂದೋ ಈಗಲೋ ತನ್ನ ವಿಜಯಪರ್ವಕ್ಕಾಗಿ ಕೊಲ್ಲಲು ಅಣಿಮಾಡಿಕೊಳ್ಳುತ್ತಿರುವುದು!

ಈ ವಚನದಲ್ಲಿ ಬಸವಣ್ಣನವರು, ಮೊದಲನೆಯದಾಗಿ, ಮಾನವನು ಇಹಸುಖಕ್ಕೆ ಸೋತು ಅಧ್ಯಾತ್ಮ ಭಾಗ್ಯದಿಂದ ವಂಚಿತನಾಗುತ್ತಿರುವನೆಂದೂ; ಎರಡನೆಯದಾಗಿ, ತಾನೇ ಸಾವಿನ ಹಬ್ಬಕ್ಕೆ ಹರಕೆಯ ಕುರಿಯಾಗಿರುವಾಗ, ಅವನು ಮತ್ತೆ ತನ್ನ ಹಬ್ಬಕ್ಕೆಂದು ಕುರಿ ಮುಂತಾದುವನ್ನು ಬಲಿಕೊಡುತ್ತಿರುವುದು ಸೋಜಿಗವೆಂದೂ ಸುಯ್ದುರೆದಿರುವರು.

---

[1] ಅಂದೆ (ಚ)

[1]A [ಮಾತು]। ಮಾತಿಂಗೆ ನಿನ್ನ ಕೊಂದಹರೆಂದು
[2]ಅಳು ಕಂಡಾ, ಎಲೆ ಹೋತೇ ![2]
ವೇದವನೋದಿದವರ ಮುಂದೆ ಅಳು ಕಂಡಾ [3]ಹೋತೇ[3]
[4]ಶಾಸ್ತ್ರವನೋದಿದವರ ಮುಂದೆ ಅಳು ಕಂಡಾ![4]
ನೀನತ್ತುದಕೆ ತಕ್ಕುದ ಮಾಡುವ ಕೂಡಲಸಂಗಮದೇವ 93

ಅಶಿಕ್ಷಿತ ನಾಡಾಡಿಗಳು ತಮ್ಮಟೆ ಹರೆಗಳ ಘೋರ ಧ್ವನಿಮಾಡಿ, ಮಾರಿ ಮಸಣಿ ಮುಂತಾದುವಕ್ಕೆ ಕೋಳಿ ಕುರಿ ಕೋಣಗಳನ್ನು ಬಲಿಕೊಟ್ಟರೆ, ಸುಶಿಕ್ಷಿತ ನಾಗರಿಕರು ವೇದ-ಮಂತ್ರಘೋಷಮಾಡಿ, ಇಂದ್ರ ವರುಣಾದಿ ದೇವತೆಗಳಿಗೆ ಅಜ-ಗೋ-ಅಶ್ವಗಳನ್ನು ಬಲಿ ಕೊಡುತ್ತಿದ್ದರು. ಪ್ರಕಾರ ಬೇರೆ ಬೇರೆಯಾದರೂ, ಅನಾಚಾರ ಒಂದೇ, ಮನೋವಿಕಾರ ಒಂದೇ ! ಬಸವಣ್ಣನವರು ತಾವು ಹುಟ್ಟಿ ಬೆಳೆದ ಬಾಗೇವಾಡಿ ಯಲ್ಲೋ,ಆಳಿ ಬಾಳಿದ ಕಲ್ಯಾಣದಲ್ಲೋ ಯಜ್ಞಯಾಗವೆಂಬ ಸುಶಿಕ್ಷಿತ ಕಿರಾತವೃತ್ತಿ ಯನ್ನು ಕಂಡು, ಅಂಥ ಯಾಗದಲ್ಲಿ ಯೂಪಸ್ತಂಭಕ್ಕೆ ಕಟ್ಟಿಹಾಕಿದ್ದ ಹೋತವೊಂದು ವಿಪ್ರರ ವೇದಘೋಷಕ್ಕೆ ಹೆದರಿ ಚೀರುತ್ತಿದ್ದುದನ್ನು ಕಂಡು, ಹೀಗೆ ಹೇಳಿರುವರು: ಯಾವಾಗ ಕೊಲ್ಲುವರೋ ಎಂದು ಮಾತು ಮಾತಿಗೂ ಹೆದರುತ್ತಿರುವೆಯಾ? ಎಲೆ ಹೋತೇ , ವೇದ-ಶಾಸ್ತ್ರಗಳನ್ನು ಓದಿದವರ ಮುಂದೆ ನೀನಿಂದು ಅಳು, ಅವರಿಗೆ ತಕ್ಕು ದನ್ನು ಮಾಡುವನು, ದಕ್ಷನ ಯಾಗವನ್ನು ಧ್ವಂಸಮಾಡಿ ಪಶುಪ್ರಾಣಿಗಳ ಸೆರೆಬಿಡಿಸಿದ ನಲ್ಲವೇ ಆ ಮಹಾದೇವನು !

---

[1] ಮಾತಿನ (ಸರ್ವತ್ರ)
[2] (ಚ) ಎಲೆ ಹೋತೇ ಅಳುಕಂಡಾ (ಅನ್ಯತ್ರ)
[3] (ಚ) × (ಅನ್ಯತ್ರ)
[4] (ಚ) (ನಿ) ಶಾಸ್ತ್ರವ ಕೇಳಿದವರ ಮುಂದೆ ಅಳುಕಂಡಾ (ಅನ್ಯತ್ರ)

A ಈ ಮುಂದಿನದನ್ನು ಹೋಲಿಸಿ ನೋಡಿ :
"ಮಾತು ಮಾತಿಗೆ, ನಿನ್ನ ಕೊಂದರಲ್ಲೋ ಹೋತೇ,
ಅಳು ಕಂಡೆಯಾ ! ಮತ್ತೆ ಅಳು ಕಂಡೆಯಾ
ವೇದವ ಬಲ್ಲವರಿಗೊಮ್ಮೆ ಅಳು ಕಂಡೆಯಾ !
ಶಾಸ್ತ್ರವ ಬಲ್ಲವರಿಗೊಮ್ಮೆ ಅಳು ಕಂಡೆಯಾ !
ಶ್ಲೋಕ॥
ಅಜೋವಿಧಿರಜೋ ವಿಷ್ಣು ರಜಶ್ಶಂಭುರಜಸ್ತಥಾ
ಅಜಸ್ತ್ರೀವರ್ಷಕೋವ್ರೀಹಿರಜೋ ರಾಮಪಿತಾಮಹಃ" ॥
ನಿನ್ನ ಘನಕ್ಕೆ ತಕ್ಕುದ ಬಲ್ಲ ಕೂಡಲಸಂಗಮದೇವ (ಸಿಂಗಿರಾಜ ಪುರಾಣ)

ದಯವಿಲ್ಲದ ಧರ್ಮವದೇವುದಯ್ಯ ?
ದಯವೇ ಬೇಕು ಸಕಲಪ್ರಾಣಿಗಳೆಲ್ಲಅಲ್ಲಿ!
ದಯವೇ 'ಧರ್ಮದ' ಮೂಲವಯ್ಯ !
ಕೂಡಲಸಂಗಯ್ಯರಂತಲ್ಲದೊಲ್ಲನಯ್ಯ ! 94

ಸಮಾನಧರ್ಮದ ವ್ಯಕ್ತಿಸಮೂಹವೇ ಸಮಾಜ, ಒಬ್ಬರ ಕಷ್ಟ–ಸುಖಗಳಿಗಾಗಿ ಮತ್ತೊಬ್ಬರು ಮಿಡುಕಿ ತೋರಿದ ಅನುಕಂಪನವೇ ವ್ಯಕ್ತಿಯನ್ನು ಸಮಾಜವನ್ನಾಗಿ ಬಂಧಿಸಿ ಪರಸ್ಪರ ಸಂಬಂಧಿಸಿರುವ ಸುವರ್ಣಸೂತ್ರಪ್ರಾಯವಾದ ಸಹಾನುಭೂತಿ. ಆ ಸಹಾನುಭೂತಿಯಿಂದ ಉದ್ಭವಿಸಿದಅನುಕೂಲ ಪ್ರತಿಕ್ರಿಯೆಯ ಸ್ಪಷ್ಟರೂಪವೇ ದಯೆ. ಈ ದಯೆಯ ಮೂಲಾಂಶವಿಲ್ಲದೆ ಯಾವ ಧರ್ಮವೂ ತನ್ನ ಮೂಲೋದ್ದೇಶವಾದ ಸಮಷ್ಟಿಹಿತವನ್ನು ಕಿಂಚಿತ್ತೂ ಸಾಧಿಸದೆ, ಅಸೂಯೆ–ಅಹಿತಸ್ಪರ್ಧೆ–ವೈರ ವಿಧ್ವಂಸನೆಗಳಿಗೆ ಪುಟ ಕೊಟ್ಟು ಸರ್ವನಾಶವನ್ನುಂಟುಮಾಡುವುದು. ಆದುದರಿಂದಲೇ ವಿಶ್ವಬಾಂಧವ್ಯದಮೇಲೆ ಕಟ್ಟಿದ ಯಾವ ಧರ್ಮದಲ್ಲೇ ಆಗಲಿ, ಆಯಾ ಧರ್ಮಪ್ರವರ್ತಕರಾದ ಪುರಾತನಾಚಾರ್ಯರು ದಯೆಗೆ ಪ್ರಥಮ ಸ್ಥಾನವನ್ನು ಕೊಟ್ಟು ಅದರತ್ತಲೇ ಎಲ್ಲರ ಅವಧಾರಣೆಯಿರಲೆಂದು ಒತ್ತಿ ಒತ್ತಿ ಮತ್ತೆ ಮತ್ತೆ ಹೇಳಿರುವರು.

ಕೊಲುವನೇ ಮಾದಿಗ !
ಹೊಲಸ ತಿಂಬವನೇ ಹೊಲೆಯ !
ಕುಲವೇನೋ [2](ಆವಂದಿರ)[2] ಕುಲವೇನೋ ?
ಸಕಲ-ಜೀವಾತ್ಮರಿಗೆ ಲೇಸನೇ ಬಯಸುವ
ನಮ್ಮ ಕೂಡಲಸಂಗನ ಶರಣರೇ ಕುಲಜರು ! 95

ಮಾದಿಗ ಮಾದಿಗ ಎಂದು ಊರ ಹೊರಗಿನವರನ್ನು ಕಂಡು ಮೂಗುಮುರಿಯುವರು; ಹೊಲೆಯರೇನು ಊರ ಒಳಗಿಲ್ಲವೆ ? ಪರಹಿಂಸೆಯಲ್ಲಿ ತೊಡಗಿ, ಜೀವಜಾಲವನ್ನು ಯಜ್ಞಯಾಗದ ನೆಪದಲ್ಲಿ ಕೊಂದು ತಿಂದವರು ಹೊಲೆಯರಲ್ಲವೆ? ಈ ಒಳಗು-ಹೊರಗಿನ ಹುಸಿ ವೈಯಾರವೇಕೆ ? ಯಾವನು ಹುಟ್ಟಿದ ಕುಲ ಏನಾದರಾಗಿರಲಿ, ಯಾವನು ಸಕಲ ಜೀವಾತ್ಮರಿಗೆ ಒಳ್ಳೆಯ:ದನ್ನು ಹಾರೈಸುವನೋ ಅವನೇ ಕುಲಜ ಅಲ್ಲದವನು ಹೀನ !

1 ಭಕ್ತಿಯ (ಏ)
2 ಆವದಿರ (ಸಿ) ಆವಂದಿರ (ಹಳ) (ಕ) (ಸ)

ಕಳಬೇಡ, ಕೊಲಬೇಡ ಹುಸಿಯ ನುಡಿಯಲುಬೇಡ !
ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ !
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ !
ಇದೇ ಅಂತರಂಗಶುದ್ಧಿ ! ಇದೇ ಬಹಿರಂಗಶುದ್ಧಿ !
ಇದೇ ನಮ್ಮ ಕೂಡಲಸಂಗಮದೇವನೊಲಿಸುವ ಪರಿ ! !

ಅಂತರಂಗ ಬಹಿರಂಗ ಈ ಎರಡೂ ಶುದ್ಧವಾಗಿರಬೇಕೆಂಬುದೇ ವೇದ ಆಗಮ ಶಾಸ್ತ್ರ ಪುರಾಣ ಮುಂತಾದ ಎಲ್ಲ ಧರ್ಮವಾಣಿಯ ಮರ್ಮಧ್ವನಿ ! ಆದರೆ ಇದನ್ನು ನಿತ್ಯ ವ್ಯವಹಾರಕ್ಕೆ ಇಳಿಸುವ ವಿವರವಿವೇಚನಾಶಕ್ತಿಯಿಲ್ಲದ ಜನ ಅನೂಚಾನವಾಗಿ ಬಂದ ಕೇವಲ ಆಡಂಬರದ ಅರ್ಚನೆ-ಪೂಜೆಗಳಲ್ಲಿ ತೊಡಗಿ ಕಾಯ ಕ್ಲೇಶಕ್ಕೂ, ಜಪ ತಪಗಳಲ್ಲಿ ತೊಡಗಿ ಮನಃ ಕ್ಲೇಶಕ್ಕೂ ಈಡಾಗಿ, ಇದೇ ಅಂತರಂಗ-ಬಹಿರಂಗ-ಶುದ್ಧಿ ಯೆಂದು ವ್ಯರ್ಥಶ್ರಮ ಪಡುವುದನ್ನು ಕಂಡು, ಬಸವಣ್ಣನವರು ಮಾನವನ ಗಮನ ವನ್ನು ಅದ್ಯಂತವಾಗಿ ಅವನ ನಿತ್ಯಜೀವನದ ವ್ಯವಹಾರಗಳತ್ತ ಸೆಳೆದು, ಅಲ್ಲಿ ಆಯ ತಪ್ಪದಿರಲೆಂದು ಕರೆ ನೀಡಿದರು. ಕಳ್ಳತನ ಮಾಡಬೇಡ, ಕೊಲ್ಲಬೇಡವೆನ್ನುತ್ತ ಕಾಯಶುದ್ಧಿಯನ್ನೂ ; ಸುಳ್ಳನ್ನು ಹೇಳಬೇಡ, ಪರದೂಷಣೆಯಲ್ಲಿ ನಿರತನಾಗ ಬೇಡ, ಆತ್ಮಪ್ರಶಂಸೆಯಲ್ಲಿ ತೊಡಗಬೇಡವೆನ್ನುತ್ತ ವಾಕ್ ಶುದ್ಧಿಯನ್ನೂ; ಕೋಪಿಸ ಬೇಡ, ಅನ್ಯರಿಗೆ ಅಸಹಿಷ್ಣುತೆಯನ್ನು ಸೂಚಿಸಬೇಡವೆನ್ನುತ್ತ ಮನಶ್ಶುದ್ಧಿಯನ್ನೂ ನಿರ್ದೇಶಿಸಿ, ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ ; ಅಂತರ್-ಭಹಿರು ಭಯಾಂಗ ಶುದ್ಧಿಯೆಂದು ಸಾರಿ ಸಾರಿ ಹೇಳಿರುವರು.

ಹೊಯ್ದರೆ ಹೊಯ್ಗಳು ಕೈಯ ಮೇಲೆ!
ಬೈಯ್ದರೆ ಬೈಯ್ಗಳು ಕೈಯ ಮೇಲೆ!
ಹಿಂದಣ ಜನನವೇನಾದರಾಗಲಿ
ಇಂದಿನ ಭೋಗವು ಕೈಯ ಮೇಲೆ!
ಕೂಡಲಸಂಗಮದೇವಯ್ಯ
ನಿಮ್ಮ ಪೂಜಿಸಿದ ಫಲ ಕೈಯ ಮೇಲೆ! 97

ನಮ್ಮ ಈ ಜನ್ಮದ ಈ ಹೊತ್ತಿನ ಆಗುಹೋಗುಗಳಿಗೆಲ್ಲ ಹಿಂದಣ ಜನ್ಮದ ಕಟ್ಟುಕದಲ್ಲಿ ಕಾರಣವನ್ನು ಹುಡುಕುವುದು ಬೇಡ. ಅದರಿಂದ ವಿಧಿವಾದವು ತಲೆದೋರಿ ಪೌರುಷವು ಹಿಮ್ಮೆಟ್ಟುವುದು. ದೃಢವಾದ ಕಾರ್ಯಶೀಲವು ಶಿಥಿಲಗೊಂಡು, ಯೋಜನೆ ಮತ್ತು ಸಾಧನೆಗಳು ಸ್ಥಗಿತಗೊಳ್ಳುವವು-ಎಂದು, ಜೀವನವು ಅವ್ಯವಸ್ಥಿತ ವಾಗುವುದನ್ನು ಸಹಿಸದೆ, ಬಸವಣ್ಣನವರು ಪುರಾಕೃತ ಕರ್ಮಗಳ ಜನ್ಮ ಜನ್ಮಾಂತರ ವ್ಯಾಪಕತೆಯನ್ನು ಅಲ್ಲಗಳೆದರು. ನಮ್ಮ ಇಂದಿನ ಜೀವನದ ಗೆಲವು-ನಲವುಗಳ ಮೇಲೆ ಹಿಂದಣ ಜನ್ಮಗಳ ಕರಾಳಚ್ಛಾಯೆ ಬೀಳದೆಂದೂ, ಬಿದ್ದೀತೆಂದು ಕಂಗೆಡಬಾರ ದೆಂದೂ, ಧೈರ್ಯತುಂಬಿ, ಪ್ರಸ್ತುತಕಾರ್ಯ ಚಟುವಟಿಕೆಗಳತ್ತ ನಮ್ಮನ್ನು ಹುರಿದುಂಬಿಸಿರುವರು.

ನಾವು ಒಬ್ಬರಿಗೆ ಹೊಡೆದರೆ, ಹೊಡೆತಗಳು ಈ ಜನ್ಮದಲ್ಲೇ ಈಗಲೇ ಹಿಂತಿರುಗಿ ಬೀಳುವವು, ಬೈದರೆ ಬೈಗಳು ಈ ಜನ್ಮದಲ್ಲೇ ಈಗಲೇ ಹಿಂತಿರುಗಿ ಬರುವವು. ಅದ ಕ್ಕೇಕೆ ಇನ್ನೊಂದು ಜನ್ಮ ? ಆದುದರಿಂದ ಕೈಯೆತ್ತಿ ದೇವರನ್ನು ಪೂಜಿಸು, ಶಿವನು ನಿನಗೆ ಭೋಗಭಾಗ್ಯಗಳನ್ನು, ಕೈಯೆತ್ತಿ ಆ ಕೈಯ ಮೇಲೇ, ಈ ಜನ್ಮದಲ್ಲೇ, ಈಗಲೇ ಕೊಡುವನು—ಎಂದಿರುವರು.

ಎನಗಿಂತ ಕಿರಿಯರಿಲ್ಲ !
ಶಿವಭಕ್ತರಿಗಿಂತ ಹಿರಿಯರಿಲ್ಲ !
ನಿಮ್ಮ ಪಾದ ಸಾಕ್ಷಿ, ಎನ್ನ ಮನ ಸಾಕ್ಷಿ !
ಕೂಡಲಸಂಗಮದೇವ, ಎನಗಿದೇ ದಿಬ್ಯ !

ಆಗಬೇಕಾದ ಹಲವಾರು ರಚನಾತ್ಮಕ ಕಾರ್ಯಗಳಿಗೆ ಅಪರಿಹಾರ್ಯ ವಿಘ್ನವೆಂದರೆ ಅನ್ಯರಶಕ್ತಿಸಾಮರ್ಥ್ಯಗಳನ್ನು ಮಾನ್ಯಮಾಡದ ಅಹಂಕಾರವೇ ಆಗಿದೆ. ಇದರಿಂದ ಮಾನವರ ಶಕ್ತಿ ಹರಿದು ಹಂಚಿ ಹೋಗಿ ಅಪವ್ಯಯವಾಗುತ್ತಿರುವುದಷ್ಟೇ ಅಲ್ಲದೆ, ಅದು ಪರಸ್ಪರ ವಿರುದ್ಧವಾಗಿ ಪ್ರವರ್ತಿಸಿ ಲೋಕದ ಸರ್ವಾಂಗೀಣ ಸಂವೃದ್ಧಿಯನ್ನು ಸಾಧಿಸಲಡ್ಡಿಯಾಗುತ್ತಿದೆ. ವ್ಯಕ್ತಿಪ್ರತಿಷ್ಠೆಯಿಂದಾಗಿ ಇಷ್ಟು ಸಾಮೂಹಿಕನಷ್ಟ ಸಂಭವಿಸುವುದೆಂಬುದನ್ನು ಮನವರಿಕೆ ಮಾಡಿಕೊಂಡ ಬಸವಣ್ಣನವರು ಅಹಂಕಾರ ನಿರಸನದ ನಿಲುವನ್ನು ತಳೆದು, ತನಗಿಂತ ಕಿರಿಯರಿಲ್ಲವೆಂದೂ, ಶಿವಭಕ್ತರಿಗಿಂತ ಹಿರಿಯರಿಲ್ಲವೆಂದೂ ಉದ್ಘೋಷಿಸಿದರು. ಜಗತ್ತಿನ ಸುಧಾರಕರೆಲ್ಲ, ಸೇವಾಧುರೀಣರೆಲ್ಲ ಈ ನಿಲುವಿನಲ್ಲಿ ನಿಂತರೆ, ಮಾನವಪ್ರಕರಣವೆಲ್ಲ ರಣವಾಗದೆ ಓರಣವಾಗುವುದು. ಬಸವಣ್ಣನವರಿಗೆ ಈ ಮಾತಿನಲ್ಲಿ ಮತ್ತು ಕಾರ್ಯರೀತಿಯಲ್ಲಿ ಸಂಪೂರ್ಣ ಶ್ರದ್ಧೆಯಿದೆ ಮತ್ತು ನಿಶ್ಚಲನಿರ್ಧಾರವಿದೆ. ಆದುದರಿಂದಲೇ, ಅವರು ಶಿವನ ಪಾದ ಮುಟ್ಟಿ ಪ್ರತಿಜ್ಞೆಮಾಡುವರು. ಇದಕ್ಕೆ ತಪ್ಪಿದರೆ, ಶಿವನ ಪಾದ ತಮ್ಮ ಕೈಗೆ ಕಾದ ಕಬ್ಬಿಣವಾಗಲೆಂದು ಪರಿಚ್ಛೇದಿಸಿರುವರು.

ನ್ಯಾಯ[1]ನಿಷ್ಠೂರಿ, [2]ದಾಕ್ಷಿಣ್ಯಪರನಲ್ಲ[2] !
ಲೋಕವಿರೋಧಿ ಶರಣನಾರಿಗಂಜುವನಲ್ಲ !
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ! 99

ಸ್ವಂತಕ್ಕೆ ಮತ್ತು ಲೋಕಾಂತಕ್ಕೆ ಹಿತವಾದುದು ಪ್ರಿಯವಲ್ಲದಿದ್ದರೂ, ಅದನ್ನು ಸ್ವಾಗತಿಸುವ ಉದಾರ ಮತ್ತು ಪುರೋಹಿತಪ್ರಜ್ಞೆಯು ಶಿವಶರಣನಾದವನ ಶೀಲದ ವೈಶಿಷ್ಟ್ಯ ! ಸಾಧಕ ಬಾಧಕಗಳ ಪೂರ್ವಾಪರ ವಿಮರ್ಶೆಯಾದಮೇಲೂ, ಕಾರ್ಯವಿಧಾನದಲ್ಲಿ ಸಂದಿಗ್ಧ ಪರಿಸ್ಥಿತಿಯೊದಗಿ ಧರ್ಮಸಂಕಟದಲ್ಲಿ ಸಿಕ್ಕಿಬಿದ್ದಾಗ, ಆತ್ಮವಾಣಿ ತೋರಿದ ದಾರಿಯಲ್ಲಿ ಧೀರವಾಗಿ ನಡೆದಲ್ಲದೆ ಗತ್ಯಂತರವಿಲ್ಲ. ಸ್ವಪ್ರಯೋಜನ ಸ್ವಪ್ರತಿಷ್ಠೆಗಳಿಗಲ್ಲದೆ, ಲೋಕ-ಹಿತಾರ್ಥಕ್ಕಾಗಿ ತಾನು ತುಳಿದ ಹಾದಿ ಉಳಿದವರ ಹಾದಿಗಿಂತ ಭಿನ್ನವಾದರೂ. ಭಯಪಡುವುದೇನಿದೆ ? ಆ ಹಾದಿಯನ್ನು ಹಿಡಿಯುವ, ಹಿಡಿದ ಹಾದಿಯಲ್ಲೆ ನಡೆಯುವ ಪ್ರೇರಣೆ ಧೋರಣೆಗಳು ತನ್ನಂತರಂಗದ ದೊರೆಯಿಂದ ದೊರೆತಿರುವಾಗ ಶರಣನಾದವನಿಗೆ ಅಂಜುವುದಿನ್ನೇನಿದೆ. ಶಿವಸಾಮಜಶರಣನಿಗೆ ನಡೆದುದೇ ಹಾದಿ, ನುಡಿದುದೇ ವೇದ.

---

[1] [ನಿ] ನಿಷ್ಠುರ [ಹಳ] [ಕ] ನಿಷ್ಠುರಿ [ಸ]
[2] [x] ದಾಕ್ಷಿಣ್ಯಪರನು ನಾನಲ್ಲ [ಅನ್ಯತ್ರ]

ಹೊಯ್ದವರೆನ್ನ ಹೊರೆದವರೆಂಬೆನು।
ಬೈದವರೆನ್ನ ಬಂಧುಗಳೆಂಬೆನು।
ನಿಂದಿಸಿದವರೆನ್ನ ತಂದೆ-ತಾಯಿಗಳೆಂಬೆನು।
ಆಳಿಗೊಂಡವರೆನ್ನ ಆಳ್ದರೆಂಬೆನು।
ಜರಿದವರೆನ್ನ ಜನ್ಮಬಂಧುಗಳೆಂಬೆನು।
[1]ಹೊಗಳಿದವರೆನ್ನ[2] ಹೊನ್ನಶೂಲದಲಿಕ್ಕಿ[3]ದವರು
ಕೂಡಲಸಂಗಮದೇವ. 100

ಕಾರ್ಯಕ್ಷೇತ್ರದ ಉನ್ನತ ಸ್ಥಾನಗಳಿದ್ದು, ಭವಿತವ್ಯದ ಸೂತ್ರಗಳನ್ನು ಕೈಯಲ್ಲಿ ಹಿಡಿದಿರುವ ಧುರೀಣರಿಗೆ-ಅವರ ಪರಿಜನರೂ, ಪರಮಸ್ನೇಹಿತರೂ, ಸಲಹೆಗಾರರೂ ಸಾಧಕ, ಬಾಧಕಗಳನ್ನು ತೂಗಿ ನೋಡಿ, ನಿಷ್ಪಕ್ಷಪಾತವಾದ ನಿಲವನ್ನೂ ನೀತಿಯನ್ನೂ ಹೇಳುವಷ್ಟು ಮುಂಗಾಣ್ಕೆಯಿಲ್ಲದವರಿರಬಹುದು. ಅಥವಾ ಸ್ವಪ್ರಯೋಜನ ಕಾತರರಾಗಿ ಆ ಜನ ಒಡೆಯನಿಗೆ ರುಚಿಸದಾದೀತೆಂದು, ಹಿತಕಾರಿಯಾದರೂ ಅಪ್ರಿಯವಾದುದನ್ನು ಹೇಳದೆ ಹೋಗಬಹುದು. ಈ ಎರಡೂ ಸಂದರ್ಭಗಳಲ್ಲಿ ತನ್ನ ಓರೆಕೋರೆಗಳತ್ತ ಬೆರಳು ಮಾಡಿ ತೋರದೆ ಬರಿಯ ಹೊಗಳಿಕೆಯಲ್ಲಿ ತನ್ನವರೆನಿಸಿಕೊಂಡವರು ದಾರಿ ತಪ್ಪಿಸುವುದು ಸಹಜ. ಇದರಿಂದಾಗಿ ಪಕ್ಷಪಂಗಡಗಳ ವೈಮನಸ್ಯದ ಕಳೆ ಬೆಳೆದು, ಅಭಿವೃದ್ಧಿಯ ಬೆಳೆ ಕಳೆಗುಂದುವುದು. ಆದುದರಿಂದಲೇ ಬಸವಣ್ಣನವರು ಹೊಗಳಿದವರೆನ್ನ ಹೊನ್ನ ಶೂಲದಲಿಕ್ಕಿದವರೆಂದಿರುವರು. ಶೂಲ ಹೊನ್ನಿನದಾದರೇನು ಕಬ್ಬೊನ್ನಿನದಾದರೇನು ? ಶೂಲ ಒಂದೇ ! ಹಿತವಾದುದನ್ನು ನಿರ್ದಾಕ್ಷಿಣ್ಯವಾಗಿ, ನಿಷ್ಠುರವಾಗಿ, ಕೊನೆಗೆ, ಝಂಕಿಸಿ ಹಿಂಸಿಸಿ ಹೇಳಿದರೂ, ಅವರೇ ತನ್ನ ನಿಜವಾದ ಹಿತೈಷಿಗಳೆಂದು ಪ್ರತಿಪಕ್ಷವನ್ನು ಪುರಸ್ಕರಿಸಬೇಕು. ಸಾಂಸ್ಥಿಕವಾದ ವಿಸ್ತಾರ ಕ್ಷೇತ್ರಕ್ಕೆ ಅನ್ವಯಿಸುವ ಈ ಮಾತು ವೈಯಕ್ತಿಕ ಸಾಧನೆಯ ಸ್ವಾಂತ-ಸ್ವಲ್ಪ-ಕ್ಷೇತ್ರಕ್ಕೂ ಅನ್ವಯಿಸುವುದು.

---

[1] (ಐ) (ಅನ್ಯತ್ರ)
[2] (ಆಚರಣೆಯ ವಚನ-85) ಕೊಂಡಾಡಿದವರೆನ್ನ (ಅನ್ಯತ್ರ)
[3] ಪವರೆಂಬೆ (ಆಚರಣೆಯ ವಚನ-85)

ಕಾಯದ ಕಳವಳಕ್ಕಂಜಿ ಕಾಯಯ್ಯ ಎನ್ನೆನು !
ಜೀವನೋಪಾಯಕ್ಕಂಜಿ ಈಯಯ್ಯ ಎನ್ನೆನು !
[1](ಯದ್ಭಾವ್ಯಂ) ತದ್ಭವತಿ ! ಉರಿಬರಲಿ ! ಸಿರಿಬರಲಿ ! !
ಬೇಕು–ಬೇಡೆನ್ನೆನಯ್ಯ !
[2]ನಾ ನಿಮ್ಮ ಹಾರೆನು ! ಮಾನವರ ಬೇಡೆನು !
ಆಣೆ ನಿಮ್ಮಾಣೆ ಕೂಡಲಸಂಗಮದೇವ !

101

ಮಾನವರನ್ನು ಬೇಡುವುದಿಲ್ಲವೆನ್ನುವುದು ಮಾನವದೇವನ ಮಾತಾದರೆ ದೇವರನ್ನೂ ಬೇಡುವುದಿಲ್ಲವೆನ್ನುವುದು ದೇವಮಾನವನ ಮಾತು. ಮಾನವನನ್ನು ಬೇಡುವುದಿಲ್ಲವೆಂದ ಮೇಲೆ, ಮಾನವನನ್ನು ಆಶ್ರಯಿಸಿ ಪಡೆಯಬಹುದಾದ ಜೀವಿಕೆಗಾಗಿ ದೇವರನ್ನು ಬೇಡುವುದು ಅವಿವೇಕ. ದೈವದಿಂದ ಅಪರಿಹಾರ್ಯವಾಗಿ ಒದಗುವ ಕಾಯದ ಕಳವಳವೆಂಬ ವ್ಯಾಧಿ–ಮರಣಗಳನ್ನು ಪರಿಹರಿಸೆಂದು ದೇವರನ್ನು ಬೇಡುವುದರಿಂದಲಾದರೂ ಪ್ರಯೋಜನವೇನು ? ಶರಣನು ಸರಳಜೀವಿ; ಅವನಿಗೆ ಮರಣವೆ ಮಹಾನವಮಿ. ಉರಿ-ಸಿರಿಯೆಂಬ ದ್ವಂದ್ವವನ್ನು ದಾಟಿ, ಸಮಧಾತು–ಸ್ಥಿತಪ್ರಜ್ಞನಾದವನಿಗೆ, ಬೇಕು-ಬೇಡವೆಂಬ ಪ್ರವೃತ್ತಿ–ನಿವೃತ್ತಿಗಳನ್ನು ದಾಟಿ ಸ್ವಸ್ಥನಾದವನಿಗೆ, ಮಾನವರಿಂದಾಗಲಿ ದೇವರಿಂದಾಗಲಿ ಬೇಡಿ ಪಡೆಯಬೇಕೆಂಬುದೇನೂ ಇಲ್ಲ. ಆಗುವುದಾಗಲಿ, ಆಗಬೇಕಾಗಿರುವುದನ್ನು ತ್ಯಾಗದಿಂದ ಆಗಿಸುವೆನೆಂಬುದೇ ಶರಣನ ಹಠ.

---

[1] ಯದ್ಭಾವಂ ತದ್ಭವತಿ ಎಂದುದಾಗಿ (ಚ)
ಯದ್ಭಾವಂ ತದ್ಭವತಿ (ಅನ್ಯತ್ರ)
[2] ಆ (ಸ) ಆನು (ಹಳ)

ಹೊನ್ನಿನೊಳಗೊಂದರೆಯು
ಸೀರೆಯೊಳಗೊಂದೆಳೆಯು
[1]ಇಂದಿಂಗೆ[1] ನಾಳಿಂಗೆ ಬೇಕೆಂದೆನಾದರೆ
ನಿಮ್ಮಾಣೆ ನಿಮ್ಮ [2]ಪ್ರಮಥರಾಣೆ[2]!
ನಿಮ್ಮ ಶರಣರಿಗಲ್ಲದೆ [3]ಮತ್ತೊಂದಕ್ಕೆ ಮಾಡೆನು[3]
ಕೂಡಲಸಂಗಮದೇವ 102

ಸಂಗ್ರಹಿಸಿದಷ್ಟೂ ದಾಹ, ಅನುಭವಿಸಿದಷ್ಟೂ ಆಶೆ, ತುಪ್ಪವನ್ನು ಸುರಿದಷ್ಟೂ ಅಗ್ನಿಜ್ವಾಲೆ! ಈ ತುಪ್ಪ ಸುರಿಯುವುದನ್ನು ನಿಲ್ಲಿಸುವುದೊಂದೇ, ಜ್ವಾಲೆಯನ್ನು ನಂದಿಸಲಿರುವ ಒಂದೇ ಒಂದು ಮಾರ್ಗ. ಹಾಗೆಯೇ, ಸ್ವಾರ್ಥ ಸುಖಕ್ಕಾಗಿ, ಇಂದಿಗಿರಲಿ ನಾಳೆಗಿರಲೆಂದು, ಅವಶ್ಯಕವಾದುದಕ್ಕಿಂತ ಅಧಿಕವಾಗಿ ಧನ-ಕನಕ–ಧಾನ್ಯ–ವಸ್ತ್ರಗಳನ್ನು ಮುಚ್ಚಿಡುವುದೇ ಅಭಾವ ಹಾಹಾಕಾರಗಳಿಗೆಲ್ಲಾ ಮೂಲಕಾರಣ, ಎಲ್ಲರೂ ಬಳಸುವುದಕ್ಕಿಲ್ಲದಿರುವಾಗ, ಎಲ್ಲವನ್ನೂ ಮುಚ್ಚಿಡುವ ವಿಪರ್ಯಾಸಕ್ಕೆ ಕಾರಣ ಸ್ವಂತ–ಸುಖ-ತೃಪ್ತಿ. ಆದುದರಿಂದಲೇ ಬಸವಣ್ಣನವರು ಸರ್ವರ ಸುಖಕ್ಕಲ್ಲದೆ ಸ್ವಸುಖಕ್ಕಾಗಿ ಏನನ್ನೂ ಮಾಡೆನೆಂದಿರುವರು.

ಅನುದಿನದ ಕಾಯಕದಿಂದ ಆರ್ಜಿಸಿ ತಂದುದರಿಂದಲೇ ಜಂಗಮಸೇವೆ ಮತ್ತು ಸ್ವಸೇವೆ ಮಾಡಲು ಅನುವಿರುವಾಗ, ಹೊನ್ನುವಸ್ತ್ರಗಳನ್ನು ಪರರ ಕಣ್ ತಪ್ಪಿಸಿ ಮುಚ್ಚಿಡುವುದು ಮಹಾ ದ್ರೋಹವೆನಿಸೀತು!

---

[1] ಇಂದಿಗೆ ಬೇಕು (ಲಿ)
[2] (ಲಿ) (ಶೂ) (ಕ) ಪುರಾತನರಾಣೆ (ಏ) ಪುರಾತರಾಣೆ (ಅನ್ಯತ್ರ)
[3] (ಸR) ಮತ್ತೊಂದಕ್ಕೀಯೆನು (ಏ) ಮತ್ತೊಂದನರಿಯೆ (ಅನ್ಯತ್ರ)

ನಾನು ಆರಂಭವ ಮಾಡುವೆನಯ್ಯ ಗುರುಪೂಜೆಗೆಂದು !
ನಾನು [1]ವ್ಯವಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು !
ನಾನು ಪರಸೇವೆಯ ಮಾಡುವೆನಯ್ಯ ಜಂಗಮದಾಸೋಹಕ್ಕೆಂದು
ನಾನಾವ ಕರ್ಮಗಳ ಮಾಡಿದರೆಯೂ
ಆ ಕರ್ಮಫಲಭೋಗವ ನೀ ಕೊಡುವೆಯೆಂಬುದ ನಾ ಬಲ್ಲೆನು !
ನೀ ಕೊಟ್ಟ ದ್ರವ್ಯವ ನಿಮಗಲ್ಲದೆ [2]ಮತ್ತೊಂದಕ್ಕೆ ಮಾಡೆನು !
ನಿಮ್ಮ ಸೊಮ್ಮಿಂಗೆ ಸಲ್ಲಿಸುವೆನು,
ನಿಮ್ಮಾಣೆ ಕೂಡಲಸಂಗಮದೇವ ! 103

ನಾನು ವ್ಯವಸಾಯ ಮಾಡಲಿ, ವ್ಯಾಪಾರಮಾಡಲಿ, ಅನ್ಯರಮನೆಯಲ್ಲಿ ಆಳಾಗಿ ದುಡಿಯಲಿ, ನನ್ನ ದುಡಿಮೆಯೆಲ್ಲ ಗುರು-ಲಿಂಗ-ಜಂಗಮದಾಸೋಹಕ್ಕಾಗಿಯೇ. ಆದುದರಿಂದ ಯಾವ ವಿಧವಾದ ದುಡಿಮೆಯನ್ನು ಮಾಡವಲ್ಲಾಗಲಿ ಮಾನಾವಮಾನದ ಪ್ರಶ್ನೆಯೇ ಬರುವುದಿಲ್ಲ. ಮತ್ತೆ ಮಾನವನು ಮಾಡುವ ಆ ಸಕಲ ವಿಧವಾದ ಕರ್ಮಗಳಿಗೂ ಪ್ರತಿಫಲವನ್ನು ಕೊಡುವನಾದರೂ ಯಾರು ? ದೇವರೊಬ್ಬನೇ ! ಆದುದರಿಂದ ಮೇಲು ಕೀಳೆನ್ನದೆ ನಾನು ಯಾವ ಕಾಯಕವನ್ನಾದರೂ ಮಾಡಲು ಸಿದ್ಧ. ಮೇಲಾಗಿ ಶಿವನಿಂದ ಬಂದ ಆದಾಯವನ್ನು ಶಿವಸಂಬಂಧವಾದುದಕ್ಕೆ ವ್ಯಯ ಮಾಡುವೆನೇ ಹೊರತು ಮತ್ತೊಂದಕ್ಕಲ್ಲ. ಹೀಗೆ ನನ್ನ ಜೀವನೋಪಾಯ ಶುದ್ಧವಾಗಿದೆ. ನನ್ನ ಜೀವನಾದಾಯವೂ ಶಿವಾರ್ಪಿತವಾಗಿದೆ. ನನಗಿನ್ನಾವಕರ್ಮಬಂಧವೂ ಇಲ್ಲ—ಎನ್ನುವರು ಕರ್ಮಯೋಗಿ ಬಸವಣ್ಣನವರು.

---

[1] (ಜ) (ಏ) ಬೆವಹಾರಕ (ಅನ್ಯತ್ರ)
[2] (ಬಿ) ಮತ್ತೊಂದು ಕ್ರಿಯ್ಯ (ಏ) ಮತ್ತೊಂದ ಕ್ರೀಯ (ಸ)

ಎನ್ನವರೊಲಿದು
ಹೊನ್ನ ಶೂಲದಲಿಕ್ಕಿದರೆನ್ನ ಹೊಗಳಿ ಹೊಗಳಿ !
[ಹೊಗಳತೆ][1] ಎನ್ನನಿನ್ಮೈಗೊಂಡಿತ್ತಲ್ಲಾ
ಅಯ್ಯಾ ನಿಮ್ಮ ಮನ್ನಣೆಯೆ ಮಸೆದಲಗಾಗಿ[2][ಯೆನ್ನ]ತಾಗಿತ್ತಲ್ಲಾ !
ಅಯ್ಯೋ ನೊಂದೆನು ಸೈರಿಸಲಾರೆನು !
ಕೂಡಲಸಂಗಮದೇವ, ನೀನೆನಗೊಳ್ಳಿದನಾದರೆ,
ಎನ್ನ ಹೊಗಳತೆಗಡ್ಡ ಬಾರಾ ಧರ್ಮೀ ! 104

ಹರಿತವಾದ ಅಲಗನ್ನು ಎಸೆದರೆ, ಅದು ಒಂದು ಕಡೆಯಿಂದ ಮೈಯನ್ನು ಕೊರೆದು ಮತ್ತೊಂದು ಕಡೆ ಮರುಮೊನೆ ತೋರುವಂತೆ, ಶಿವಕೃಪೆಯೇ ತನಗೆ ಕೂರಲ ಗಾಯಿತೆಂದು ಬಸವಣ್ಣನವರು ಮರುಗುವರು. ಅದು ಹೇಗೆಂದರೆ: ಶಿವಕೃಪೆಯಾದ ಮಹನೀಯನೆಂದು ಬಸವಣ್ಣನವರನ್ನು ಶಿವಶರಣರ ಸಮೂಹ ಮೆಚ್ಚಿ, ಬಗೆ ಹೆಚ್ಚಿ ಹೊಗಳಿತು. ಮೊದಮೊದಲಿಗೆ ಆ ಹೊಗಳಿಕೆ ಅವರ ಕಿವಿಗೆ ಸೋಕಿದರೂ, ಅದು ತಮ್ಮ ಬಗೆ ತಾಗದಂತೆ ಎಚ್ಚರಿಕೆವಹಿಸಿ ಚಿತ್ತ ಸ್ವಾಸ್ಥವನ್ನು ಕಾಪಾಡಿಕೊಂಡಿದ್ದರು. ಆದರೆ ಮಾನವನಿಗೆ ಕೀರ್ತಿಕಾಮದಷ್ಟು ಪ್ರಕರ್ಷಕವಾದ ವಿಷಯ ಮತ್ತೊಂದಿಲ್ಲವಲ್ಲಾ! ಅವರಿಗೆ ಅಪರೂಪಾದರೂ ದುರ್ಬಲವಾದ ಕೆಲವು ಘಳಿಗೆಗಳಲ್ಲಿ, ಶಿವಶರಣರ ಹೊಗಳಿಕೆ ಅವರ ಬಹಿರಂಗವನ್ನು ಭೇದಿಸಿ, ಅಂತರಂಗದ ನಿಸ್ತರಂಗಸರಸಿಯಲ್ಲಿ ತಮ್ಮ ನಂಜಿನ ಮೊನೆಯೂರಿದವು. ಆಗ ಬಸವಣ್ಣನವರು ತಮ್ಮ ಅಂತರಂಗವನ್ನು ಕಲಕಿ ಕಲುಷಿತ ಗೊಳಿಸುವ ಪ್ರಶಸ್ತಿಗೆ ಕಾರಣವಾದ ಶಿವನೊಲವನ್ನು ತಮ್ಮ ಆಧ್ಯಾತ್ಮಿಕಜೀವನದೆದೆಗೆ ನಾಟಿದ ಅಲಗಿಗೆ ಹೋಲಿಸಿ, ಶಿವನು ತನಗೆ ಹಿತೈಷಿಯಾದರೆ ಶರಣರ ಹೊಗಳಿಕೆಗೆ ಅಡ್ಡಬರಲೆಂದು ಬೇಡಿಕೊಂಡಿರುವರು.

---

1 ಎನ್ನ ಹೊಗಳತೆ [ಸರ್ವತ್ರ]
2 x [ಸರ್ವತ್ರ]

ಬ್ರಹ್ಮಪದವಿಯನೊಲ್ಲೆ !
ವಿಷ್ಣುಪದವಿಯನೊಲ್ಲೆ :
ರುದ್ರಪದವಿಯನೊಲ್ಲೆ !
'ನಾನು' ಮತ್ತಾವ ಪದವಿಯನೊಲ್ಲೆನಯ್ಯ !
ಕೂಡಲಸಂಗಮದೇವ
ನಿಮ್ಮ ಸದ್ಭಕ್ತರ ಪಾದವನರಿದಿಪ್ಪ
ಮಹಾಪದವಿಯನೆ ಕರುಣಿಸಯ್ಯ ! 105

ಸದ್ಭಕ್ತರ ಪಾದಸೇವೆಗಿಂತ ಪವಿತ್ರವಾದುದೆನಿಸಲಿಲ್ಲ ಬ್ರಹ್ಮ–ವಿಷ್ಣು–ರುದ್ರ ಪದವಿಗಳು ಬಸವಣ್ಣನವರಿಗೆ. ಅವರು ನಿಜವಾದ ಮಣ್ಣಿನ ಮಗ. ಎಲ್ಲ ದಿವ್ಯಪದವಿಗಳನ್ನೂ ಇಹದಲ್ಲೇ ಕಂಡುಕೊಂಡರು. ಸಜ್ಜನರ ಸೇವೆಯಲ್ಲಿ ಹೆಜ್ಜೇನಿನ ಸವಿಯನ್ನು ಕಂಡುಕೊಂಡರು.

ಭಕ್ತಿಯಿಲ್ಲದ ಬಡವ ನಾನಯ್ಯ !
ಕಕ್ಕಯ್ಯನ ಮನೆಯಲು ಬೇಡಿದೆ !
ಚೆನ್ನಯ್ಯನ ಮನೆಯಲು ಬೇಡಿದೆ !
ದಾಸಯ್ಯನ ಮನೆಯಲು ಬೇಡಿದೆ !
ಎಲ್ಲಾ ಪುರಾತನರು ನೆರೆದು ಭಕ್ತಿಭಿಕ್ಷವನ್ನಿಕ್ಕಿದರೆ
ಎನ್ನ ಪಾತ್ರೆ ತುಂಬಿತ್ತು ಕೂಡಲಸಂಗಮದೇವ. 196

ಬಸವಣ್ಣನವರನ್ನು ಶರಣಜನಕೋಟಿಯೆಲ್ಲ ಒಕ್ಕೊರಲಿನಿಂದ 'ಭಕ್ತಿ ಭಂಡಾರಿ' ಎಂದು ಪ್ರಶಂಸಿಸಿ ಪುರಸ್ಕರಿಸಿದರೂ, ಅವರು ತಮ್ಮನ್ನು ತಾವು "ಭಕ್ತಿಯಿಲ್ಲದ ಬಡವ"ನೆಂದುಕೊಂಡಿರುವರು. ಅವರ ಈ ಮಾತಿನಲ್ಲಿ—ತಮ್ಮ ಭಕ್ತಿಯು ಆದರ್ಶ ಪ್ರಮಾಣದಲ್ಲಿಲ್ಲವೆಂಬ, ಇರುವುದು ಅಲ್ಪ ಸ್ವಲ್ಪವಾದರೂ ಅದು ಡೋಹರ ಕಕ್ಕಯ್ಯ-ಮಾದಾರ ಚೆನ್ನಯ್ಯ-ಜೇಡರ ದಾಸಯ್ಯ ಮುಂತಾದ ಆದರ್ಶ ಭಕ್ತರ ಕೃಪೆಯಿಂದಾಗಿ ದೊರೆತುದೆಂಬ, ಆದುದರಿಂದಲೇ ಅದು ತನ್ನ ಆತ್ಮೋದ್ಧಾರಕ್ಕೆ ಸಮರ್ಥವಾಗಿದೆಯೆಂಬ ಈ ಮೂರು ಭಾವಗಳೂ ಮುಪ್ಪುರಿಗೊಂಡಿವೆ.

ಭಂಡಾರದಲ್ಲಿರುವುದು ಬಹಳವಿದ್ದರೂ ಅಲ್ಲಿರುವುದೊಂದೂ ಭಂಡಾರಿಯದಲ್ಲ. ಭಿಕ್ಷುಕನ ಕೈಯ ಪಾತ್ರೆಯುಲ್ಲಿ ಬಹಳವಿಲ್ಲದಿದ್ದರೂ ಇರುವುದೆಲ್ಲ ಅವನದೇ! ಈ ಅರ್ಥದಲ್ಲಿ ಬಸವಣ್ಣನವರು ತಮ್ಮನ್ನು ಭಕ್ತಿಭಂಡಾರಿಯಲ್ಲವೆಂದೂ, ಕೇವಲ "ಭಕ್ತಿಯ ಬಡವ"ನೆಂದೂ ಕರೆದುಕೊಂಡಿರುವುದು ಅರ್ಥವತ್ತಾಗಿದೆ.

---

! [ಹಳ] [ಅನ್ಯತ್ರ]

A ಬಸವ ಬಾರಯ್ಯ
ಮರ್ತ್ಯಲೋಕದೊಳಗೆ ಭಕ್ತರುಂಟೆ ಹೇಳಯ್ಯ?
ಮತ್ತಾರೂ ಇಲ್ಲಯ್ಯ! ಮತ್ತಾರೂ ಇಲ್ಲಯ್ಯ!
ನಾನೊಬ್ಬನೇ ಭಕ್ತನು
ಮರ್ತ್ಯಲೋಕದೊಳಗಣ ಭಕ್ತರೆಲ್ಲರೂ
ಜಂಗಮಲಿಂಗ ನೀನೇ ಅಯ್ಯ ಕೂಡಲಸಂಗಮದೇವA 107

ಮರ್ತ್ಯಲೋಕದಲ್ಲಿ ಭಕ್ತಿಯ ಬೀಜವನ್ನು ಬಿತ್ತುವುದಕ್ಕಾಗಿಯೇ ಬಸವಣ್ಣನವರು ಶಿವನ ಆಜ್ಞೆಯನ್ನು ಶಿರಸಾವಹಿಸಿ ಅವತರಿಸಿದವರು. ಅವರ ನೇತೃತ್ವದಲ್ಲಿ ಕರ್ಣಾಟಕದೆಲ್ಲೆಡೆಯಲ್ಲೂ ಭಕ್ತಿಯ ಬೆಳೆ ಹುಲುಸಾಗಿ ಬಂದಿತು, ಬಂದ ಕೆಲಸವಾಯಿತು. ಭೂಮಿಯ ಮೇಲೆ ಭಕ್ತರ ಬಳಗ ಬೆಳೆಯಿತು. ಇನ್ನು ಕೈಲಾಸಕ್ಕೆ ಬಾರೆಂದು ಶಿವನು ಬಸವಣ್ಣನವರನ್ನು ಕೈಬೀಸಿ ಕರೆದಾಗ, ಅವರು ಶರಣರ ಸಂಗವನ್ನಗಲಿ ಬರಲಾರದೆ—ಭೂಲೋಕದಲ್ಲಿ ಭಕ್ತರಾರೂ ಇಲ್ಲ, ಇರುವ ಭಕ್ತನೆಂದರೆ ನಾನೊಬ್ಬನೇ! ಬರಲಾರೆನೆನ್ನುವರು! ಬಸವಣ್ಣನವರ ಈ ಆತ್ಮಪ್ರಶಂಸಾಭಾಸದ ಮಾತನ್ನು ಕೇಳಿ, ಎನಗಿಂತ ಕಿರಿಯರಿಲ್ಲವೆಂದವರು ಇವರೇ ಅಲ್ಲವೇ-ಎಂದು ಚಕಿತರಾಗುತ್ತೇವೆ. ಚಕಿತರಾಗುವುದೇಕೆ? ಅವರೇ ಮುಂದೆ ಹೇಳಿರುವಂತೆ ಮರ್ತ್ಯಲೋಕದ ಜನರೆಲ್ಲರೂ ನಡೆದಾಡುವ ಮಹಾದೇವಸ್ವರೂಪಿಗಳಾಗಿರುವರು. ಅವರಿಗೆ ಸೇವೆಮಾಡಲು ಉಳಿದಿರುವ ಭಕ್ತರು ತಾವೊಬ್ಬರೇ ಅಂತೆ! ಕೈಲಾಸದಲ್ಲಿ ಶಿವನ ಸೇವೆಮಾಡಲು ಅಸಂಖ್ಯಾತ ಗಣಗಳಿಸುವಾಗ, ಅಲ್ಲಿ ಬಂದು ಮಾಡುವುದೇನಿದೆ, ಇಲ್ಲೇ ನಿಂತು ನಿನ್ನ(ವರ) ಸೇವೆ ಮಾಡಿಕೊಂಡಿರುವೆನೆಂದು ಶಿವನೊಡನೆ ಸರಸವಾಡಿರುವರು. ಈ ಸರಸದಲ್ಲಿ ತಮ್ಮಿಂದ ಈ ಲೋಕ ಭಕ್ತಮಯವಾಗುವುದಿರಲಿ ಶಿವಮಯವಾಯಿತೆಂಬ ಕೃತಕೃತ್ಯತೆಯೂ,ತಮಗೆ ಶಿವಲೋಕಕ್ಕಿಂತ ಶಿವಭಕ್ತರ ಸೇವೆಯೇ ಶ್ರೇಷ್ಠವೆಂಬ ಕೈಂಕರ್ಯವೂ ಸಮರಸವಾಗಿ ಬೆರೆತಿದೆ.

---

A ಬಸವ ಮರ್ತ್ಯಮುನಂದು ಭಕ್ತುಲುಗಲರೇ?
ಎಸಕಮ್ಮೆ ಸಂಸಾರನಿಷ್ಟಮೇ ನೀಕು?
(ನನಿಯೂನತಿಚ್ಚುಡುನದ್ದೇವು ಹೃದಯುವನಜ ಸ್ಥಡಗು ಬಸವಂಡಿಟ್ಟುಲನಿಯೆ)
ಮಂಮುನಕ್ಕೆನನು ಮರ್ತ್ಯಲೋಕಮುನನಿಂದುಶೇಖರು ಭಕ್ತುಡೆಂದುನು ಲೇಡು
ಭಕ್ತುಂಡ ನೇನಜೂ, ಭಕ್ತುಲಿಂದರುನು ಭಕ್ತಾತ್ಮ
ಮೀ ಸ್ವರೂಪಂಬು ಕಾವುನನು
[ತೆಲುಗು ಬಸವ ಪುರಾಣ-ಶ್ರೀ ತಮ್ಮಯ್ಯಗಾರು, ಪುಟ 119.]

। (×)(ಜ)

ಭಕ್ತಿಯೆಂಬ ಪೃಥ್ವಿಯ ಮೇಲೆ
[1][ಗುರುವೆಂಬ ಬೀಜವಂಕುರಿಸಿ
ಲಿಂಗವೆಂಬ ಎಲೆಯಾಯಿತ್ತು !][1]
[2]ತನುವೆಂಬ ಕಟ್ಟೆಯ ಕಟ್ಟಿ
ಮನವೆಂಬ ಅಗ್ಘವಣಿಯನೆರೆದು
ಭಾವವೆಂಬ ಬೇಲಿಯ ಕಟ್ಟಿ[2]
ಲಿಂಗವೆಂಬ ಎಲೆಯ ಮೇಲೆ
ವಿಚಾರವೆಂಬ ಹೂವಾ[3]ಗಿ[3]
ಆಚಾರವೆಂಬ ಕಾಯಾ[3]ಗಿ[3]
ನಿಷ್ಪತ್ತಿಯೆಂಬ ಹಣ್ಣಾ[3]ಗಿ[3]
ತೊಟ್ಟು ಬಿಟ್ಟು [4]ಬೀಳುವಲ್ಲಿ[4]
ಕೂಡಲಸಂಗಮದೇವ ತನಗೆ ಬೇಕೆಂದೆತ್ತಿಕೊಂಡ ! 108.

ಭಕ್ತಿಯೇ ಮುಕ್ತಿಗೆ ಮೂಲಭೂಮಿಕೆ! ಆ ಭಕ್ತಿಯ ಭೂಮಿಕೆಯಲ್ಲಿ ಗುರುಕೃಪೆಯಿಂದ ಲಿಂಗದರ್ಶನವಾಗಿ, ತನು-ಮನ-ಭಾವಸರ್ವಸ್ವವೂ ಅದಕ್ಕೆ ಅರ್ಪಿತವಾದಾಗ, ಸದ್ವಿಚಾರವೂ, ಸದಾಚಾರವೂ, ನಿರಂಜನವಾದ ನಿಲವೂ ಅಳವಡುವುದು. ಅಂತಹ ಪರಿಪಕ್ವ ರಸಜೀವರನ್ನು ಶಿವನು ತನ್ನೊಳಗುಮಾಡಿಕೊಳ್ಳುವನೆಂಬ ಸಂದೇಶಸುಧೆಯನ್ನು ಸಸ್ಯ-ಜೀವನವಿಕಾಸೋಪಮಾನಪ್ರಣಾಳಿಕೆಯಲ್ಲಿ ಸಾಧಕವರ್ಗಕ್ಕೆ ಹರಿಯಬಿಟ್ಟಿರುವರು ಬಸವಣ್ಣನವರು. ಮತ್ತು ನಮ್ಮ ಜೀವನವೆಂಬ ತೋಟಕ್ಕೆ ಪರಶಿವನೇ ಮಾಲೀಕ, ನಾವು ಕೇವಲ ಮಾಲಿಗಳಷ್ಟೇ. ಅಲ್ಲಿ ನಾವು ಬೆಳೆದ ಜೀವನ್-ಮುಕ್ತಿಯ ಮಾದಲದ ಹಣ್ಣು ಶಿವನಿಗೆ ತನಿರಸದುಣಿಸಾದರೆ, ಅದಕ್ಕೆ ಸಂಭಾವನೆಯಾಗಿ ಅವನು ನಮ್ಮನ್ನು ತನ್ನವನೆಂದು ತನ್ನೊಳಗು ಮಾಡಿ ಕೊಳ್ಳುವನು.

---

1 [ಹಳ] [ಸ] ಲಿಂಗವೆಂಬ ಸಸಿ ಹುಟ್ಟ [ಏ]
2 [ಏ] x [ಹಳ] [ಸ]
3 [ಏ] ಯಿತ್ತು [ಅನ್ಯತ್ರ]
4 ಕಳಚಿ ಬೀಳುವಲ್ಲಿ [ಅನ್ಯತ್ರ]

## ಹೊಸದಾಗಿ ಸಿಕ್ಕಿರುವ ಬಸವಣ್ಣನವರ ವಚನಗಳು

### (ಮಹಲಿಂಗನ ಏಕೋತ್ತರ ಶತಸ್ಥಲದಿಂದ: K 450)

ಮೂರ್ತಿಯ ಮುಂದಣ ಮೂವರದೇನೋ ?
ಸನಕಸನಂದಾದಿಗಳಿಂದತ್ತಲು ನೋಡಾ !
ಕೂಡಲಸಂಗಮದೇವ,
ನಾನಾಳು, ನೀನಾಳ್ದ ಕಂಡಯ್ಯ. 1

ಎನ್ನ ಭವಬಂಧನ–ದುರಿತಂಗಳ ಗೆಲುವಡೆ
ಓಂ ನಮಶ್ಶಿವಾಯ ಶರಣೆಂದಡೆ ಸಾಲದೆ ?
ಜಯ ಜಯ ಶಂಕರ, ಹರಹರ ಶಂಕರ,
ಶಿವ ಶಿವ ಶಂಕರ ಶರಣೆನುತಿದ್ದೇನೆ !
ಎನ್ನ ಪಾತಕಕೋಟಿ ಪರಿಹಾರ
ಕೂಡಲಸಂಗಯ್ಯ, ಶರಣೆನ್ನುತಿದ್ದೇನೆ. 2

ಲಿಂಗದಲ್ಲಿ ಸೂತಕವ ಹಿಡಿವನ್ನಕ್ಕ
ಪ್ರಾಣ ಲಿಂಗಸಂಬಂಧಿಯೆಂತೆಂಬೆ ?
ಜಂಗಮದಲ್ಲಿ ಸೂತಕವ ಹಿಡಿವನ್ನಕ್ಕ
ಅನುಭಾವಸಂಬಂಧಿಯೆಂತೆಂಬೆ ?
ಪ್ರಸಾದದಲ್ಲಿ ಸೂತಕವ ಹಿಡಿವನ್ನಕ್ಕ
ಸ್ವಾಮಿಭೃತ್ಯಸಂಬಂಧಿಯೆಂತೆಂಬೆ ?
ಭಕ್ತನೆಂತೆಂಬೆ, ಪ್ರಸಾದಿಯೆಂತೆಂಬೆ ?
ಕೂಡಲಸಂಗಯ್ಯನಲ್ಲಿ ಶರಣನೆಂತೆಂಬೆ ? ! 3

ತನುವಿಡಿದಿಹುದು ಪ್ರಕೃತಿ, ಪ್ರಕೃತಿವಿಡಿದಿಹುದು ಪ್ರಾಣ,
ಪ್ರಾಣವಿಡಿದಿಹುದು ಜ್ಞಾನ, ಜ್ಞಾನವಿಡಿದಿಹುದು ಗುರು,
ಇಂತೀ ಗುರು–ಲಿಂಗ–ಜಂಗಮ- ಪ್ರಸಾದವ ಸಗುಣವೆಂದು ಹಿಡಿದು
ನಿರ್ಗುಣವೆಂದು ಕಂಡ ಸಂದೇಹವ್ರತಗೇಡಿಗಳನೇನೆಂಬೆ,
ಅವರ ಮುಖವ ತೋಱದಿರು ಕೂಡಲಸಂಗಮದೇವ. 4

ಗುರುವಿನಲ್ಲಿ ಸ್ವಾಯತನು, ಲಿಂಗದಲ್ಲಿ ಸನ್ನಿಹಿತನು,
ಜಂಗಮದಲ್ಲಿ ಸದರ್ಥನು, ಪ್ರಸಾದದಲ್ಲಿ ಪರಿಣಾಮಿ,
ಇಂತೀ ಚತುರ್ವಿಧದಲ್ಲಿ ಸನ್ಮತನು—
ಕೂಡಲಸಂಗಯ್ಯನಲ್ಲಿ ಚೆನ್ನಬಸವಣ್ಣನು. 5

ಗುರುವಚನವ ತನ್ನೊಳಗಿಂಬಿಟ್ಟುಕೊಂಡ
ಪ್ರಸಾದಿಯು ಪ್ರಸಾದಿಯೆಂಬೆ.
ಲಿಂಗವಚನವ ತನ್ನೊಳಗಿಂಬಿಟ್ಟುಕೊಂಡ ಪ್ರಸಾದಿಯು ಪ್ರಸಾದಿಯೆಂಬೆ.
ಜಂಗಮವಚನವ ತನ್ನೊಳಗಿಂಬಿಟ್ಟುಕೊಂಡ
ಪ್ರಸಾದಿಯು ಪ್ರಸಾದಿಯೆಂಬೆ.
ಪ್ರಸಾದವಚನವ ತನ್ನೊಳಗಿಂಬಿಟ್ಟುಕೊಂಡ
ಪ್ರಸಾದಿಯು ಪ್ರಸಾದಿಯೆಂಬೆ.
ಇಂತೀ ಚತುರ್ವಿಧಸಂಪನ್ನ, ಕೂಡಲಸಂಗಯ್ಯನಲ್ಲಿ ಚೆನ್ನಬಸವಣ್ಣ ! 6

ಗುರುಸ್ವಾಯತವಾದ ಬಳಿಕ ಗುರುವ ಮಱೆಯಬೇಕಯ್ಯ.
ಲಿಂಗಸ್ವಾಯತವಾದ ಬಳಿಕ ಲಿಂಗವ ಮಱೆಯಬೇಕಯ್ಯ.
ಜಂಗಮಸ್ವಾಯತವಾದ ಬಳಿಕ ಜಂಗಮನ ಮಱೆಯಬೇಕಯ್ಯ.
ಪ್ರಸಾದ ಸ್ವಾಯತವಾದ ಬಳಿಕ ಪ್ರಸಾದವ ಮಱೆಯಬೇಕಯ್ಯ.
ಇಂತು ಗುರು–ಲಿಂಗ–ಜಂಗಮ–ಪ್ರಸಾದದಲ್ಲಿ ಪರಿಣಾಮಿಯಾಗಿ
ಸಮಯಭಕ್ತಿಯಲ್ಲಿ ಸಂತೋಷಿಯಾಗಿ
ಬದುಕಿದೆನು ಕಾಣಾ ಕೂಡಲಸಂಗಮದೇವ. 7

ಶ್ರೀ ಗುರುಲಿಂಗಜಂಗಮಕ್ಕೆ ಅರ್ಚನೆಪೂಜನೆ ದಾಸೋಹವನು
ಧರ್ಮವ ಕಾಮಿಸಿ ಮಾಡಿದಡೆ, ಧರ್ಮವಪ್ಪುದು.
ಅರ್ಥವ ಕಾಮಿಸಿ ಮಾಡಿದಡೆ, ಅರ್ಥವಪ್ಪುದು.
ಕಾಮವ ಕಾಮಿಸಿ ಮಾಡಿದೊಡೆ ಕಾಮವಪ್ಪುದು.
ಮೋಕ್ಷವ ಕಾಮಿಸಿ ಮಾಡಿದೊಡೆ ಮೋಕ್ಷವಪ್ಪುದು.
ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ,
ಸಾಯುಜ್ಯಪದವ ಕಾಮಿಸಿ ಮಾಡಿದೊಡೆ
ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ ಪದಂಗಳಪ್ಪವು.

ಕಾಮಧೇನುವ ಕಾಮಿಸಿ ಮಾಡಿದಡೆ, ಕಾಮಧೇನು ದೊರಕೊಂಬುದು.
ಕಲ್ಪತರುವ ಕಾಮಿಸಿ ಮಾಡಿದಡೆ, ಕಲ್ಪತರು ದೊರಕೊಂಬುದು
ಚಿಂತಾಮಣಿಯ ಕಾಮಿಸಿ ಮಾಡಿದಡೆ, ಚಿಂತಾಮಣಿ ದೊರಕೊಂಬುದು
ಪರುಷವ ಕಾಮಿಸಿ ಮಾಡಿದಡೆ, ಪರುಷ ದೊರಕೊಂಬುದು.
ಆವುದ ಕಾಮಿಸಿ ಮಾಡಿದಡೆಯೂ ಆ ಕಾಮಿಸಿದ ಫಲಂಗಳು ತಪ್ಪವು.
ಕೂಡಲಸಂಗಮದೇವಯ್ಯ ಪ್ರಭುವಿನಾಣೆ. 8

ಅನ್ನವನಿಕ್ಕಿದಡೆ ಪುಣ್ಯವಹುದು.
ವಸ್ತ್ರವ ಕೊಟ್ಟಡೆ ಧರ್ಮವಹುದು.
ಹಿರಣ್ಯವಕೊಟ್ಟಡೆ ಶ್ರೀಯಹುದು.
ತ್ರಿಕರಣಶುದ್ಧವಾಗಿ ನೆನೆದಡೆ ಮುಕ್ತಿಯಹುದು ಕೂಡಲಸಂಗಮದೇವ 9

ಸಜ್ಜನ-ಸದ್ಭಾವಿ ಅನ್ಯರಲ್ಲಿ ಕಯ್ಯಾಂತು ಬೇಡ,
ಲಿಂಗವ ಮುಟ್ಟದ ಕೈ ಮೀಸಲು,
ಕಂಗಳಲೊಸೆದು ನೋಡ ಪರವಧುವ,
ಮನದಲ್ಲಿ ಅನ್ಯವ ನೆನೆಯ, ಮಾನವಸೇವೆಯ ಮಾಡ,
ಲಿಂಗವ ಬೇಡ, ಲಿಂಗದ ಹಂಗನೊಲ್ಲ,
ಧನದಲ್ಲಿ ವಂಚನೆಯಿಲ್ಲ. ಕೂಡಲಸಂಗಮದೇವ ನಿಮ್ಮ ಶರಣ. 10

ಅಂಗದ ಮೇಲೆ ಲಿಂಗಪ್ರತಿಷ್ಠೆಯಾದ ಬಳಿಕ
ಮರಳಿ ಭವಿಯ ನಂಟನೆಂದು ಬೆರಸಿದಡೆ
ಕೊಂಡ ಮಾಟಿಂಗೆ ಹೋಹುದುತಪ್ಪದು,
ತ್ರಿವಿಧ ನಾಶಕನು.
ಹಸಿಯ ಮಣ್ಣಿನಲ್ಲಿ ಮಾಡಿದ ಮಡಕ್ಕೆ ಅಗ್ನಿ ಮುಖದಲ್ಲಿ ಶುದ್ಧವಾದ ಬಳಿಕ
ಅದು ತನ್ನ ಪೂರ್ವಕುಲವ ಬೆರಸುವುದೆ?
ಅಗ್ನಿದಗ್ಧಘಟೋ ಭೂಯಃ ಕುತ್ರ ವಾ ಮೃತ್ತಿ ಕಾಯತೇ ?
ತಚ್ಚಿವಾಚಾರಸಂಪನ್ನೋೀನ ಪುನರ್ಮಾನುಷೋ ಭವೇತ್ ॥
ಎಂದುದಾಗಿ
ಇದುಕಾರಣ ಪೂರ್ವನಾಸ್ತಿಯಾದ ಭಕ್ತನಪೂರ್ವ
ಕೂಡಲಸಂಗಮದೇವ. 11

ಅದ್ವೈತಿಗಳು ಲಿಂಗಾರಾಧನೆಯ ಹುಸಿಯೆಂದು ಬುದ್ಧಿಗೆಟ್ಟು
ಆಗಮಧರ್ಮವನಱಿಯದೆ ಬೊಮ್ಮವಾನೆಂದಡೆ
ಬ್ರಹ್ಮನ ಶಿರವ ದಂಡವ ಕೊಂಡುದನಱಿಯಿರೇ ?
ಬೊಮ್ಮವಾದಿಗಳೆಲ್ಲ ಲಿಂಗಕ್ಕೆ ದೂರವಾದರು !
ನಮ್ಮ ಕೂಡಲಸಂಗನ ನಂಬಿದ ಶರಣರು
ಜಗವಂದ್ಯರಾದರು !! 12

ತನುವೆಂತಿರ್ದಡೇನಯ್ಯ,
ಮನ ನಿರ್ಮಲವಾಗಿರ್ದಡೆ ಸಾಲದೇ ?
ಎಂತಿರ್ದಡೇನು ಲಿಂಗಭಕ್ತ ?
ಎಂತಿರ್ದಡೇನು ಲಿಂಗಶರಣ, ಎಂತಿರ್ದಡೇನಯ್ಯ ?
ಶಿಶು ನೊಂದಡೆ ತಾಯಿ ನೊಂದಂತೆ ಕೂಡಲಸಂಗಮದೇವ. 13

ಹಾವು-ಕಿಚ್ಚು ಮುಟ್ಟಹನು ಶಿಶುವೆಂದು
ಹೆತ್ತ ತಾಯಿ ಮಗನ ಬೆಂಬತ್ತಿ ಬಪ್ಪಂತೆ,
ಇಪ್ಪ ಎನ್ನೊಡನೊಡನೆ ಕೂಡಲಸಂಗಮದೇವ
ಕಾಯಿದುಕೊಂಡಿಪ್ಪನಾಗಿ ! 14

ಒಡಲುಗೊಂಡು ಹುಟ್ಟಿದ ಘಟಕ್ಕೆ ಅಷ್ಟೋತ್ತರಶತವ್ಯಾಧಿ
ಅದಕ್ಕೆ ಔಷಧಿಯ ತಂದು ಹೊರೆವರು.
ಆ ಪರಿ ನಾನದ ಹೊರೆಯೆನು !
ಅದೇನು ಕಾರಣವೆಂದಡೆ :
ಭವರೋಗವೈದ್ಯ–ಭವಹರನೆಂಬ ಬಿರಿದು ನಿಮ್ಮದಾಗಿ !
ಇದು ಕಾರಣ, ಕೂಡಲಸಂಗಮದೇವ,
ನಿಮ್ಮ ಪುರಾತನರ ಪ್ರಸಾದವನಲ್ಲದೆ ಕೊಂಡೊಡೆ ನಿಮ್ಮಾಣೆ. 15

ಬೇಡದಿರು ಶಿವಭಕ್ತರಲ್ಲದವರ,
ಬೇಡಿ ಬೆಂಡಾಗದಿರು,
ಬೇಡಿದರೆ ಹುರುಳಿಲ್ಲ.
ಬೇಡಿದ ಕೈಗೆ ತಡೆಯಿಲ್ಲದೆ ಕೊಡಬಲ್ಲರು ಕೂಡಲಸಂಗನ ಶರಣರು ! 16

ಕಾಮಿಸಿದಲ್ಲದೆ ಕೊಡದು ಕಾಮಧೇನು,
ಕಲ್ಪಿಸಿದಲ್ಲದೆ ಕೊಡದು ಕಲ್ಪತರು,
ಚಿಂತಿಸಿದಲ್ಲದೆ ಕೊಡದು ಚಿಂತಾಮಣಿ,
ಭಾವಿಸಿದಲ್ಲದೆ ಕೊಡನು ಶಿವನು !
ಕಾಮಿಸದೆ, ಕಲ್ಪಿಸದೆ, ಚಿಂತಿಸದೆ,
ಭಾವಿಸದೆ ಕೊಡಬಲ್ಲರು ಕೂಡಲಸಂಗನ ಶರಣರು ! ! 17

ಶರಣ ಮನಬಂದಂತೆ ಮಾಡುವ.
ಅಱಿಸಿ ಸಕಳಾಗಮಾಚಾರ್ಯನಪ್ಪ.
ಅಹುದಾಗದೆಂಬ ಪರಿಯಲ್ಲ ನೋಡಾ-.-
ಕೂಡಲಸಂಗನ ಶರಣ ಸಂಗಿಯಲ್ಲ ನಿಸ್ಸಂಗಿಯಲ್ಲ ! 18

ಅಂಗಲಿಂಗಸಂಬಂಧವಾದವರ ಲಿಂಗವೆಂದೇ ಕಾಬುದು.
"ಕೀಟೋಪಿ ಭ್ರಮರಾಯತೇ'' ಎಂಬ ನ್ಯಾಯದಂತೆ,
ಅಂಗ ಲಿಂಗ-ಸೋಂಕಿ ಲಿಂಗವಾಯಿತ್ತಾಗಿ ಲಿಂಗವೆಂದೇ ಕಾಂಬುದು.
"ಸರ್ಪದಷ್ಟಸ್ಯ ಯದ್ದೇಹಃ ತದ್ದೇಹೋ ವಿಷದೇಹವತ್
ಲಿಂಗದಷ್ಟಸ್ಯ ಯದ್ದೇಹಃ ತದ್ದೇಹೋ ಲಿಂಗದೇಹವತ್"
ಎಂದುದಾಗಿ
ಸರ್ವಾಂಗ ಲಿಂಗ ಕೂಡಲಸಂಗನ ಶರಣರ. 19

ಅಂದಂದಿಂಗೆ ಬಂದ ಪದಾರ್ಥವನೆಂದೆಂದೂ
ತಾ ಉಂಬ ಕೈಯಲ್ಲಿ ಎಂತೋ ಲಿಂಗಕ್ಕೆ ನೀಡುವರು !
ಲಿಂಗಕ್ಕೆ ಕೊಡುವರೆಂತೋ ?
ಲಿಂಗಕ್ಕೆ ಸಲುವುದೆಂತೋ ? !
ಮಂಚವೊಂದೇ ಕಂಚು ಬೇಱೆಂಬ
ಪ್ರಪಂಚಿಯನೊಲ್ಲ ಕೂಡಲಸಂಗಮದೇವ. 20

ನಾರಿಕಲ್ಲ ಹರಳಿನಂತೆ, ಅರಗಿನ ಪುತ್ಥಳಿಯಂತೆ,
ತನು ಕರಗಿ, ಮನ, ಬೆರಸಿ, ನೆರೆವ ಸುಖವನೇನೆಂಬೆ—
ಕಡೆಗೋಡಿವರಿದವೆನಗಯ್ಯ ನಯನದ ಅಶ್ರುಜಲಂಗಳು !
ನಮ್ಮ ಕೂಡಲಸಂಗಮದೇವರ ಮುಟ್ಟಿ ನೆರೆವ ಸುಖವನೇನೆಂಬೆ ! ! 21

ತನು ಭಕ್ತ, ಮನ ದಾಸೋಹಿ, ಇಂದ್ರಿಯಂಗಳು ಪ್ರಸಾದಿಗಳು,
ಸಜ್ಜನ ಶರಣರ ಪ್ರಾಣವೇ ಲಿಂಗ !
ಇದು ಕಾರಣ, ಕೂಡಲಸಂಗಮದೇವ,
ಎನಗೆ ಹೊಱಗೇನೂ ಆಟಸಲಿಲ್ಲ. 22

ಲಿಂಗಾರ್ಚನೆಯ ಮಾಡಿ ಲಿಂಗಕರ್ಪಿಸಿದ ಪ್ರಸಾದವನಲ್ಲದೆ
ಭೋಗಿಸೆನೆಂಬ ಪ್ರಸಾದಿಭಕ್ತನು
ಅನರ್ಪಿತವ ನೆನೆವ ಪರಿಯೆಂತೋ ?
ಅನರ್ಪಿತವ ನೋಡುವ ಪರಿಯೆಂತೋ ?
ಅನರ್ಪಿತವ ಕೇಳುವ ಪರಿಯೆಂತೋ ?
ಅನರ್ಪಿತವ ವಾಸಿಸುವ ಪರಿಯೆಂತೋ ?
ಅನರ್ಪಿತವ ಮುಟ್ಟುವ ಪರಿಯೆಂತೋ ?
ಅನರ್ಪಿತವ ರುಚಿಸುವ ಪರಿಯೆಂತೊ ?
ಈ ವರ್ಮಕುಳವನಾರಿಗೂ ಅಱಿಯಬಾರದು !
ಕೂಡಲಸಂಗಮದೇವರನ ಱಿತಡಱಿವುದು !
ಮಱಿದಡೆ ಮಱಿವುದು !! 23

ನಿನಗೆ ಮಜ್ಜನಕ್ಕೆಱೆವುದಕ್ಕೆ ಮುಂಚುಟಾಗಿ
ಶ್ರೀಗುರುವಿನ ಪಾದೋದಕವ ಕೊಂಬೆ.
ನಿನಗೆ ಆರೋಗಣೆಯ ಮಾಡಿಸುವುದಕ್ಕೆ ಮುಂಚುಟಾಗಿ
ಶ್ರೀಗುರುವಿನ ಪ್ರಸಾದವ ಕೊಂಬೆ.
ಎನಗೆಯೂ ನಿನಗೆಯೂ ಸಹಭೋಜನ !
ಎನಗೆಯೂ ನಿನಗೆಯೂ ಏಕಾರ್ಥಶಯನ !
ನೀನೆನಗೆ ಚಿಕ್ಕ ತಮ್ಮ ಕೂಡಲಸಂಗಮದೇವ ! 24

ಲಿಂಗಕ್ಕೆ ಕೊಟ್ಟು ಕೊಂಡಡೆ ಪ್ರಸಾದಿ.
ಜಂಗಮಕ್ಕೆ ಆರೋಗಣೆಯ ಮಾಡಿಸಿ ಮಿಕ್ಕುದು ಪ್ರಸಾದ.
ಇದೇ ಪ್ರಸಾದದಾದಿ ಕಂಡಯ್ಯ.
ಮುನ್ನಾದಿಯ ಪ್ರಸಾದವ ಭೇದಿಸಬಲ್ಲಡೆ ಇದೇ ಕಂಡಯ್ಯ !
ಲಿಂಗಕ್ಕೆ ಕೊಡದೆ ಕೊಂಡಡೆ
ಹುಳುಗೊಂಡದಲ್ಲಿಕ್ಕುವ ನಮ್ಮ ಕೂಡಲಸಂಗಮದೇವ. 25

ಜೀವವೆಂಬೆರಡಕ್ಕರವನು ದೇಹವೆಂದಱಿದೆನಯ್ಯ.
ದೇಹವೆಂಬೆರಡಕ್ಕರವನು ಹಂಸನೆಂಬ ದಳಕ್ಕೆ ವಿಭಾಗಿಸಿದೆನಯ್ಯ,
ಹಂಸನೆಂಬೆರಡಕ್ಕರವನು ಜ್ಞಾನಚಕ್ಷುವಿನ ಭ್ರೂಮಧ್ಯದಲ್ಲಿ
ದ್ವಿದಳವೆಂದಱಿದೆನಯ್ಯ
ಒಂದು ದಳವನೆ ಕರ್ತನ ಮಾಡಿ,
ಒಂದು ದಳವನೆ ಭೃತ್ಯನ ಮಾಡಿ,
ಈ ಎರಡು ದಳದ ನಡುವಿಪ್ಪ ಪರಂಜ್ಯೋತಿಯನು
ತ್ರಿಕೂಟವೆಂದುಱಿದು ಕೂಡಿದೆನಯ್ಯ.
ಇಂತು ಕೂಡಿದಲ್ಲಿ ಪರಿಚರಿಯವ ಮಾಡುತಿರ್ದೆನಯ್ಯ.
ಮೊದಲ ಪರಿಚರಿಯುದಲ್ಲಿ ನಿರ್ಮಳೋದಕವ ತುಂಬಿದೆ ಒಂದು ದಳದೊಳಗೆ;
ಎರಡನೆಯ ಪರಿಚರಿಯುದಲ್ಲಿ
ಒಂದು ದಳದಲ್ಲಿ ಆ ಉದಕವ ಗಡಣಿಸುತ್ತಿದ್ದೆ.
ಇರಲಿರಲು ಎರಡೆರಡು ದಳವೂ ಅಳಿದು ಜಲ ಮೀರೆದಪ್ಪಲು
ಮನ ಮೀರಿದಪ್ಪಿ ಆರೋಗಿಸಿದೆನಯ್ಯ.
ಆ ಆರೋಗಿಸಿದ ತೃಪ್ತಿಯ ನೀನೇ ಬಲ್ಲೆ ಕೂಡಲಸಂಗಮದೇವ. 26

ಜ್ಞಾನದ ಗಮನದ ಸಹಜದ ಉದಯದಲ್ಲಿ ಏನೆಂದಱಿಯೆನು!
ಲಿಂಗದ ಬೆಳಗೊಳಕೊಂಡಿತ್ತಾಗಿ ಏನೆಂದಱಿಯೆನು !
ಕೂಡಲಸಂಗಮದೇವರ ಧ್ಯಾನದಲ್ಲಿ ಏನೆಂದಱಿಯೆನಯ್ಯ ! 27

ಗುರು-ಮುಂತಾಗಿ ಕೊಂಡುದು ಪ್ರಸಾದವಲ್ಲ ?
ಲಿಂಗ-ಮುಂತಾಗಿ ಕೊಂಡುದು ಪ್ರಸಾದವಲ್ಲ ?
ಜಂಗಮ-ಮುಂತಾಗಿ ಕೊಂಡುದು ಪ್ರಸಾದವಲ್ಲ ?
ಪ್ರಸಾದ-ಮುಂತಾಗಿ ಕೊಂಡುದು ಪ್ರಸಾದವಲ್ಲ ?
ಅಂತಪ್ಪ ಪ್ರಸಾದವೆ ಬೇಕು !
ಅಂತಪ್ಪ ಪ್ರಸಾದವ ತೋರಿ ಬದುಕಿಸಯ್ಯ ಕೂಡಲಸಂಗಮದೇವ. 28

ಸ್ಥೂಲತನುವೆಂಬ ಭಾಂಡದಲ್ಲಿ
ಸರ್ವಾಚಾರವೆಂಬ ಸಯಿದಾನವ ತುಂಬಿದೆ ;
ತುಂಬಲೊಡನೆ ಅಗ್ನಿಯಿಲ್ಲದ ಮುನ್ನ ಪಾಕವಾಯಿತ್ತು !
ಮೇಲು ಸಾಧನವಿಲ್ಲದ ಮುನ್ನ ರುಚಿಪಕ್ವವಾಯಿತ್ತು !!

ಅದನು ಸೂಕ್ಷ್ಮತನುವೆಂಬ ಭಾಂಡದಲ್ಲಿ ಬಟ್ಟಿಕೆಯಿದ ಕಾರಣ
ತನುವಿನಲ್ಲಿ ಕುಳ್ಳಿರ್ದು ಉಂಡೆನೆಂಬಾನಂದವಡಲು,
ಪ್ರಕೃ[+ತಿ ?] ಒಂದೇ ಭಾಂಡವಾದುದ ಕಂಡು
ಉಣಲೊಲ್ಲದೆ, ಅನ್ಯರಿಗಿಕ್ಕದೆ, ಎನ್ನದೆನ್ನದೆ,
ಸಯುಸಂಧಾನಂಗಳ ತೆಗೆದು ಬಳಸದೆ,
ಬಳಸಿ ಬೀಸರವೋಗದೆ
ಒಂದಱೊಳ[+ಗೊಂದ]ನದೆ
ಉಂಡು ಸುಖಿಯಾದೆನಯ್ಯ ಕೂಡಲಸಂಗಮದೇವ. 29

ಅತಳ–ವಿತಳ[ಸು]ತಳ–ಮಹೀತಳ-ತಳಾತಳ-ರಸಾತಳ–
ಪಾತಾಳದಿಂತ್ತತ್ತ ನಿಮ್ಮ ಚರಣ !
ಭೂಲೋಕ–ಭುವರ್ಲೋಕ-ಸ್ವರ್ಲೋಕ-ಮಹಾಲೋಕ–ಜನರ್ಲೋಕ–
ತಪರ್ಲೋಕ–ಸತ್ಯಲೋಕದಿಂದತ್ತತ್ತ ನಿಮ್ಮ ಉತ್ತಮಾಂಗ !
ಈರೇಳು ಭುವನ ನಿಮ್ಮ ಉದರದ ಕೊಳೆಯೊಳಡಗಿಹವಯ್ಯ ! !
ಆರೋ(ಗಣೆಯ ಮಾಡಿಸುವಡೆ ಆ ಮಹಾಲಿಂಗಗಿನ್ನೆಹಗೆ ?
ತನು[ರು ?]ವಿನೊಳಗೆ ಅನಲ ಬರಿತವಾಗಿಹುದಯ್ಯ
ಮಥನದಿಂದ ತೋರಿ ಆಹುತಿಗೊಂಬಂತೆ ಸರ್ವಗತ ನೀನು
ನಿತ್ಯಾನಂದಮಯ ಭಕ್ತಿಲೀಲಾವಿನೋದ ದೇವಾ,
ಸುಚಿತ್ತ–ಮನ ಮೀಸಲು
ನಿನಗಳವಡಿಸುವ ಓಗರವಿದೇ !
ಆರೋಗಣೆಯ ಮಾಡೈ ಕೂಡಲಸಂಗಮದೇವ ! 30

(ಮೈಸೂರಿನ ಪಾಚ್ಯಸಂಶೋಧನಾಲಯದಲ್ಲಿನ K 648 ನೇ
ಓಲೇಗ್ರಂಥದಿಂದ ಉದ್ಧೃತ)

ಕತ್ತಲೆಯ ನುಂಗಿದ ದೀಪದ ಬೆಳಗಿನಂತೆ,
ಕರ್ದಮವನೀಂಟಿದ ಸುಜಲದಂತೆ,
ಮಧು–ರಸವನಱಿವ ಜಿಹ್ವೆಯಂತೆ,
ಎನ್ನ ಕಂಗಳಿಗೆ ದೃಷ್ಟವಾಗಿ, ಮನಕ್ಕೆ ಮನೋಹರವಾಗಿ,
ಕೂಡಲಸಂಗಮದೇವರಲ್ಲಿ
ಪ್ರಭುದೇವರ ಸುಳುಹು ಚಿಹ್ನವಾಯಿತ್ತು ! 31

ಆತ್ಮನ ಸುಳುಹು ನಿಂದ ಮತ್ತೆ
ಕಾಯದ ಅವತಾರವಳಿಯಿತ್ತು !
ನೀನೆಂಬ ಭಾವವಜಿತಲ್ಲಿ
ಕೂಡಲಸಂಗಮದೇವರ ಭಾವ ಪ್ರಭುದೇವರಲ್ಲಿ ಐಕ್ಯವಾಯಿತ್ತು ! 32

(ಸಿದ್ಧಲಿಂಗ ಏಕೋತ್ತರ ಶತಸ್ಥಲದಿಂದ)

ಎನಗೆ ಕುಲದೈವ ಬಲದೈವ ಛಲದೈವ
ಮನದೈವ ಮನೆದೈವ ಜಂಗಮಮೂರ್ತಿಯಯ್ಯ.
ತನು ಮೀಸಲು ಮನ ಮೀಸಲು ಧನ ಮೀಸಲು
ಪ್ರಾಣ ಮೀಸಲು ಜ್ಞಾನ ಮೀಸಲು
ಕೂಡಲಸಂಗಮದೇವ ನಿಮ್ಮ ಶರಣರಿಗೆ.
ಕುಲವಳಿದು, ಛಲವಳಿದು, ಮದವಳಿದು, ಮತ್ಸರವಳಿದು
ಆತ್ಮತೇಜವುಳಿದು,
ಸರ್ವ ಅಹಂಕಾರವಳಿದು
ಶ್ರೀಮನ್ನಿಜ ಉಳಿದು,
ಲಿಂಗಜಂಗಮವೆಂಬ ಶಬ್ದವಿಡಿದು ಸಾಧ್ಯವಾಯಿತ್ತು ನೋಡಾ !
ತಾನಳಿದು ತಾನುಳಿದು
ಸಹಜ ಪದವಿಯುಲ್ಲಿ ಕೂಡಲಸಂಗಯ್ಯನಲ್ಲಿ ತಾನು ತಾನಾದ ! 33

ಭಕ್ತ ಶಾಂತನಾಗಿರಬೇಕು
ತನ್ನ ಕುರಿತು ಬಂದ ತಾವಿನಲ್ಲಿ ಸತ್ಯವಾಗಿರಬೇಕು
ಭೂತಹಿತವಹ ವಚನವ ನುಡಿಯಬೇಕು
ಲಿಂಗಜಂಗಮದಲ್ಲಿ ಕುಂದುನಿಂದೆಗಳಿಲ್ಲದಿರಬೇಕು
ಸಕಲ ಪ್ರಾಣಿಗಳ ತನ್ನಂತೆ ಭಾವಿಸಬೇಕು
ತನು-ಮನ-ಧನವ-ಗುರುಲಿಂಗ-ಜಂಗಮಕ್ಕೆ ಸಮರ್ಪಿಸಬೇಕು
ಅಪಾತ್ರ ದಾನವಂಗೆಯ್ಯದಿರಬೇಕು
ಸಕಲ ಇಂದ್ರಿಯಂಗಳು ತನ್ನ ವಶಗತವಾಗಿರಬೇಕು —
ಇದೇ ಮೊದಲಲ್ಲಿ ದೇಹಶೌಚ ನೋಡಾ !
ಲಿಂಗವ ಪೂಜಿಸಿ ಪ್ರಸಾದವ ಪಡೆವಡೆ
ಎನಗಿದೇ ಸಾಧಕವು ನೋಡಾ ಕೂಡಲಸಂಗಮದೇವಾ ! ! 34

ಆಚಾರವನಾಚಾರವಾಯಿತ್ತು
ಸೀಮೆ ನಿಸ್ಸೀಮೆಯಾಯಿತ್ತು
ಪ್ರಾಣಸಂಚಲ ತಪ್ಪಿ ಲಿಂಗಸಂಚಲವಾಯಿತ್ತು
ಎಲ್ಲಿ ಶಬ್ದವು ಅಲ್ಲಿ ಲಿಂಗಸ್ವಾಯತವಾಯಿತ್ತು
ಎಲ್ಲಿ ಸುಗಂಧವು ಅಲ್ಲಿ ಲಿಂಗಸ್ವಾಯತವಾಯಿತ್ತು
ಕೂಡಲಸಂಗಮದೇವರ ಕರುಣದ
ಕಡೆಗೋಡಿವರಿಯಿತ್ತಯ್ಯ ಎನ್ನಮೇಲೆ !! 35

ಲಿಂಗಗಂಭೀರ–ನಿಸ್ಸಂಗಿಯ ಸಂಗವ ನಾನೇನೆಂಬೆನಯ್ಯ !
ಪಾರಮಾರ್ಥದಿಂದ ಗಮಿಸುವ ಗಮನವ ನಾನೇನೆಂಬೆನಯ್ಯ !
ಕೂಡಲಸಂಗನ ಶರಣರು ಕಾಯದ ನೆವದಿಂದ ಅರ್ಪಿಸುವ
ಬೆಡಗ ನಾನೇನೆಂಬೆನಯ್ಯ ! 36

---

ಅಘೋರ – ಅತ್ಯಂತ ಘೋರ
ಅಡಾಯುಧ—ಖಡ್ಗ, ಕತ್ತಿ
ಅತಿಗಳೆ—ಪರಿಹರಿಸು
ಅಂದಣ—ಪಲ್ಲಕ್ಕಿ
ಅಂಧಕ—ಕುರುಡ
ಅಧರ—ತುಟಿ[ನಾಲಗೆ]
ಅನುದಿನ—ಪ್ರತಿದಿನ
ಅಂಬುಜ—ಕಮಲ, ತಾವರೆ
ಅಂಬುಧಿ—ಸಮುದ್ರ
ಅಪ್ಪು—ಆಲಿಂಗಿಸು, ತಬ್ಬು
ಅವಲೋಹ—ಚಿನ್ನವಲ್ಲದ ಕೀಳುಲೋಹ
ಆಗು—ಸಂಪತ್ತು
ಆಡು—ಕುಣಿ, ನೃತ್ಯಮಾಡು
ಆದ್ಯರು—ಪ್ರಮಥರು, ಬಸವ ಮುಂತಾದ ವರಿಗಿಂತ ಮೊದಲ ಶರಣರು
ಆಪ್ಯಾಯನ–1)ಹಸಿವು 2) ಪ್ರೀತಿ, ತೃಪ್ತಿ
ಆಳಿಗೊಳ್–ತೊಂದರೆ ಕೊಡು, ಹಿಂಸಿಸು
ಆವಂದಿರು—ಯಾರಾದರೂ
ಇಮ್ಮನ—ಎರಡುಮಾನ, ಅಳತೆಯ ಎರಡು ಪಾತ್ರೆಯಷ್ಟು 2)ಅನೇಕಾಗ್ರತೆ, ಚಾಂಚಲ್ಯ, ಎರಡು ಮನಸ್ಸು,ಎರಡು ಬಗೆ
ಉರಿಗರಗಾಗಿ–ಉರಿಗೆ ಒಡ್ಡಿದ ಅರಗಿನಂತೆ ಮಣಿದು
ಎಯ್ದುವ್ವ—ಸಾಲವು, ಸಾಕಾಗವು
ಎಳಸು—ಬಯಸು, ಪ್ರೀತಿಸು
ಏಡಿಸು–ವಿಡಂಬಿಸು,ಮುಖ ತಿರುವು,ಕಾಡು
ಏನಿ—ಏನು ರೀತಿ, ಏನು ಸ್ವಾಮಿ
ಏವುದಯ್ಯ—ಏನುಮಾಡುವುದಯ್ಯ, ನಿಷ್ಪ್ರಯೋಜಕವಯ್ಯ
ಐದುವವು—ಸಿಗುವವು
ಒಮ್ಮನ—1) ಒಮ್ಮಾನ, ಒಂದು ಮಾನ, ಒಂದು ಮಾನದಷ್ಟು ಅಳತೆ 2) ಒಂದೇ ಮನಸ್ಸು, ನಿಶ್ಚಲತೆ ಏಕಾಗ್ರತೆ ನಿಷ್ಠೆ
ಕಬ್ಬಿಲ—ಬೇಡ
ಕಮ್ಮಟ—ಟಂಕಸಾಲೆ, ನಾಣ್ಯಮಾಡುವ ಕಾರ್ಖಾನೆ
ಕರಕಷ್ಟ—ಅತ್ಯಂತ ನಿಕೃಷ್ಟ
ಕರಲೇಸು—ಬಹಳ ಒಳ್ಳೆಯದು
ಕರಿ—ಆನೆ
ಕಳುವೊಡೆ—ಕಳ್ಳತನ ಮಾಡುವುದಾದರೆ
ಕಳೆ—ಬಿಚ್ಚು
ಕಳೆದುಕೊಂಡು—ಒರೆಯಿಂದ ಹೊರಕ್ಕೆ ಸೆಳೆದುಕೊಂಡು
ಕಾಡಿಸೊಪ್ಪು–ಒಂದು ವಿಧವಾದ ಸೊಪ್ಪು
ಕಿರುಕುಣಿಕೆ—ಕಿರುಬೆರಳು
ಕೂಪವರು—ಪ್ರೀತಿಸುವವರು
ಕೂರಲಗು—ಹರಿತವಾದ ಕತ್ತಿ
ಕೆಳೆ—ಸ್ನೇಹ, ಸ್ನೇಹಿತ
ಕೈಯ—(=ಕೆಯ) ಹೊಲವನ್ನು
ಕೊಡಗೂಸು — ಮದುವೆಯಾಗಲಿರುವ ಹೆಣ್ಣು
ಕೊಂಡ ಮಾರಿಂಗೆ ಹೋಗು–ನಿರರ್ಥವಾಗು ನಿಷ್ಪ್ರಯೋಜಕವಾಗು
ಕೊನರು—ಚಿಗುರು
ಕೊಂಬು—ಮರಗಳ ರೆಂಬೆ

ಗರ—ಗ್ರಹ, ದೆವ್ವ
ಗಲ್ಲ—ಗದ್ದ
ಗೂಡುವೋಗು—ಬಾಗು, ಜರ್ಜರಿತವಾಗು
ಗೋವಳ—ದನಕಾಯುವವ,ಗೋಪಾಲ
ಚುಳುಕಾಗು–(ಅಂಗೈಯಲ್ಲಿ ನಿಲ್ಲುವಷ್ಟು) ಚಿಕ್ಕದಾಗು
ಚೇಗು—ಆಪತ್ತು, ಆಗು×ಚೇಗು
ಚೌಪಥ—ನಾಲ್ಕು ದಾರಿ ಸೇರುವೆಡೆ
ಜಂಗಮ—1) ಜೀವಂತ ದೇವರೆನಿಸುವ ಶಿವಶರಣ 2) ದೇಹಿ, ಜೀವಿ
ಜಂಗುಳಿ—ದನಗಳ ಹಿಂಡು
ಜಲಬಿಂದು–ಶುಕ್ಲ–ರೇತಸ್ಸು
ಜಂಬೂದ್ವೀಪನವ ಖಂಡ ಪೃಥ್ವಿ–ದೇಹ
ಜೂಬು—?
ತ್ರಿವಿಧದಾಸೋಹ–ಗುರುಲಿಂಗಜಂಗಮಕ್ಕೆ ತನುಮನಧನಗಳನ್ನು ಕೊಡುವುದು
ತುಡುಗುಣಿ–ಕದ್ದು ತಿನ್ನುವ ದನ ಇತ್ಯಾದಿ
ತೆಗೆ—ಎತ್ತಿಕೋ, ಕರೆದುಕೋ
ತೆರೆ-ಮುಪ್ಪಿನಲ್ಲಿ ಕಾಣಿಸುವ ಚರ್ಮದ ಸುಕ್ಕು
ತೊರೆಯಿಂ-ತೊರೆಯಿರಿ, ತೊರೆದುಬಿಡಿ
ದಿಬ್ಯ–ದಿವ್ಯ, ದೇವರ ಮೇಲೆ ಆಣೆಯಿಟ್ಟು ತಾನು ನಿರಪರಾಧಿ ಎಂದು ತೋರಲು ಹಿಡಿಯುವ ಕಾದ ಕಬ್ಬಿಣದ ತುಂಡು
ದೃಷ್ಟ–ದೃಷ್ಟಾಂತ, ಸಾಕ್ಷಿ, ನಿದರ್ಶನ
ನಾರಿ—ಗೃಹಿಣಿ, ಗರತಿ
ನಾವಿಂದ—ಕ್ಷೌರಿಕ
ನಿಧಾನ—ಹೂತಿಟ್ಟ ಧನ
ನೆನಹು— ಧ್ಯಾನ
ನೆರೆ—1) ಸಂಪೂರ್ಣವಾಗಿ 2) ಕೂಡು, ಸಂಭೋಗಿಸು
ನೆಲನಾಳ್ದನ—ರಾಜನ, ಭೂಪತಿಯ
ನೇಮ—ಪೂಜೆ
ನೇಹ—ಸ್ನೇಹ, ಪ್ರೀತಿ
ಪಡಿ—ಪ್ರತಿ, ಲವಾಜಮೆ, ಭತ್ಯ
ಪಡಿ–ಪದಾರ್ಥ(ಸಕಲ–)–ಪ್ರತಿಯೊಂದು ಪದಾರ್ಥವೂ, ಎಲ್ಲ ಸಾಮಗ್ರಿಯೂ
ಪತ್ತಿಗರು—ಸಂಬಂಧಿಗಳು
ಪ್ರಮಾಣು—ಸಾಕ್ಷಿ
ಪ್ರಮಾದ—ದಂಡ, ಮರಣದಂಡನೆ, ಶಿಕ್ಷೆ, ತಪ್ಪು
ಪರುಷ—ಮುಟ್ಟಿದುದನ್ನೆಲ್ಲ ಚಿನ್ನವನ್ನಾಗಿ ಮಾಡುವ ಸ್ಪರ್ಶವೆಂಬ ಮಣಿ
ಪ್ರಸಾದವೇದ್ಯ—ಗುರುಲಿಂಗ ಜಂಗಮದ ಪ್ರಸಾದವನ್ನು ಬಯಸುವವನು
ಪೂಜಿಸುವೋ—ಪೂಜಿಸಲೆಪ್ಪೋ
ಪೂಸಿಕೊಂಡು —ಸವರಿಕೊಂಡು, ಲೇಪಿಸಿ ಕೊಂಡು
ಪೇಯ—ಪೆಯ್ಯ, ವತ್ಸ, ಕರು
ಫಣಾಮಣಿ–ಹಣೆ(ಅಥವಾಹೆಡೆಯಲ್ಲಿರುವ) ರತ್ನ
ಬಗೆ—ಮನಸ್ಸು, ಸಂಕಲ್ಪ, ಇಚ್ಛೆ
ಬಂಡು—ಜೇನು, ಹೂವಿನ ರಸ
ಬತ್ತೀಸರಾಗ—ಮೂವತ್ತೆರಡು ರಾಗಗಳು
ಬಪ್ಪುದು—ಬರುವಂಥದು
ಬರುದೊರೆ ಹೋಹುದು—ಬರಿಯ ತೊರೆ

ಹರಿದು ಹೋಗುವುದು, ಪಾಪವನ್ನು ತೊಳೆಯದೆ ಬರಿ ನೀರು ಹರಿದು ಹೋಗುವುದು, ವ್ಯರ್ಥವಾಗುವುದು
ಬಲ್ಲಿದ—ಅಧಿಕನು, ಶಕ್ತನು, ಬಲಶಾಲಿ
ಬಾಜಿಸು—ನುಡಿಸು, ಬಾರಿಸು
ಬೆಸಗೊಳ್—ಪ್ರಶ್ನೆಕೇಳು,ಭಿವಿಪ್ಯವೇನೆ.ದು ಪ್ರಶ್ನಿಸು
ಬೈಕೆ—[ಬಯ್ಕೆ]ನಿಕ್ಷೇಪ, ನಿಹಿತವಾದುದು. ನಿಗೂಢವಾದುದು ಬೈಕೆಯ=ನಿಗೂಢ ವಾದ
ಬೋನ—ಅನ್ನ ಎಡೆ, ನೈವೇದ್ಯ
ಬೋಯಿತಿ—ಬೋವಿತಿ, ಬೋವಿಯವಳು
ಭಕ್ತ—ಗುರುಲಿಂಗ ಜಂಗಮದಾಸೋಹಿ
ಭವ—ಹುಟ್ಟು ಸಾವಿನ ಬವಣೆ, ಈ ಲೌಕಿಕ
ಭಾಜನವಾಗು—ಪಾತ್ರವಾಗು
ಭಾಷೆ—ಪ್ರತಿಜ್ಞೆ
ಮಚ್ಛಿಗ—ಚಮ್ಮಾರ
ಮತ್ಸ್ಯ—ಮೀನು
ಮದ್ದು—ದೇಹಕ್ಕೆ ಪುಷ್ಟಿಕೊಡುವ ಕಾಯ ಕಲ್ಪ, ಔಷಧ.
ಮಾಟ—ಕ್ರಿಯೆ. ಧಾರ್ಮಿಕಾಚರಣೆ
ಮಾಣದೆ—ಬಿಡದೆ,
ಮಾತಂಗಿ—ಅಸ್ಪೃಶ್ಯಳು, ಚಂಡಾಲ ಸ್ತ್ರೀ
ಮಾತನೂಂಕದೆ-ಮಾತನಾಡದೆ, ಮಾತನ್ನು ಮುಂದುವರಿಸದೆ
ಮಾದಾರ—ಅಸ್ಪೃಶ್ಯ
ಮಾಬನೆ—ಬಿಡುವನೆ
ಮಾರುಹೋಗು—ದಾಸನಾಗು
ಮಿಟ್ಟಿ—ಮಣ್ಣು, ಮಣ್ಣಿನ ಹೆಂಟೆ
ಮೇಲಿದಂತೆ—ತಿಂದಂತೆ
ಮೆಲಿದರೆ—ತಿಂದರೆ
ಮೈಸಿರಿ—ಠೀವಿ
ಮೊರಡಿ—ಕಲ್ಗುಡ್ಡ
ಯುಕ್ತ—ಶಿವಭಕ್ತಿಯುಕ್ತನು
ರಜ—ಕಸ
ಲಾಂಛನ—ವೇಷ, ಶರಣರ ವೇಷಭೂಷಣ ಗಳಾದ ಕಾವಿ, ಇಷ್ಟಲಿಂಗ, ಭಸ್ಮ ರುದ್ರಾಕ್ಷಿ ಮುಂತಾದುವು
ಲಿಂಗಲಾಂಛನಧಾರಿ-ಲಿಂಗವೆಂಬ ಲಾಂಛನ ವನ್ನು ಧರಿಸಿರುವ ಶಿವಭಕ್ತ
ವಜ್ರ-ಸಿಡಿಲು
ವ್ರತಿ-ಬ್ರಹ್ಮಚರ್ಯವ್ರತವನ್ನು ಕೈಗೊಂಡವ
ವ್ಯವಹಾರ—ವ್ಯಾಪಾರ
ವ್ಯಾಧ-ಬೇಟೆಗಾರ, ಬೇಡ
ವ್ಯಾಪತ್ತಿ-ಶೌರ್ಯ
ಶ್ವಪಚ-ಅಭಕ್ಷ್ಯಭಕ್ಷಕ, ಅಸ್ಪೃಶ್ಯ
ಶ್ವಪಚೋಪಿಯಾದರೇನು—ಶ್ವಪಚನಾದ ರೇನು
ಶರಣವೇದ್ಯ-ಶರಣರ ಸೇವೆಯನ್ನು ಮಾಡ ಬೇಕೆನ್ನುವವನು
ಸದರ್ಥರು-ಒಳ್ಳೆ ಅಭಿಪ್ರಾಯವುಳ್ಳವರು, ಧನಾಢ್ಯರು, ಸದಾಶಯವುಳ್ಳವರು
ಸಮದಗಜ-ಮದಿಸಿದ ಆನೆ
ಸಮ್ಯಕ್ಕರು-ಹೊಂದಾಣಿಕೆಯುಳ್ಳವರು
ಸಲುವ ಹಾಗೆ-ನಡೆಯುವ ಹಾಗೆಂಬ

ಸಲೆ–ಸಂಪೂರ್ಣವಾಗಿ

ಸವೆಸು–ಖರ್ಚುಮಾಡು, ವ್ಯಯಮಾಡು

ಸಸಿ–1) ಶಶಿ, ಚಂದ್ರ, 2) ಸಸ್ಯದ ಮರಿ

ಸಾಲಿಗ–ನೆಯ್ಗೆಯವನು

ಸ್ಥಾವರ–ಲಿಂಗಮುಂತಾದುವು [ಸ್ಥಾವರ× ಜಂಗಮ]

ಸಿರಿಗರ–ಸಂಪತ್ತೆಂಬ ದೆವ್ವ

ಸೀಮೆ–ಎಲ್ಲೆ, ಪ್ರತ್ಯೇಕಭಾವ

ಸೊಣಗ–ಶುನಕ, ನಾಯಿ

ಸೊಮ್ಮು–ಸಂಬಂಧ–ಹಕ್ಕು–ಬಾಧ್ಯತೆ

ಸೋರೆ–ವೀಣೆಗೆ ಜೋಡಿಸುವ ಒಣಗಿದ ಸೋರೆ ಬುರುಡೆ

ಹದುಳಿರು–ಕ್ಷೇಮವಾಗಿರು

ಹಂದೆ–ಹೇಡಿ

ಹಯನಹುದು—ಈಲಾಗುವುದು, ಕರು ಹಾಕುವುದು

ಹರದ–ವೈಶ್ಯ, ವ್ಯಾಪಾರಿ

ಹರಿ–ಮುಂದಾಗು, ನುಗ್ಗು

ಹಾಗ– ಒಂದು ಹಳೆಯ ಕಾಲದ ನಾಣ್ಯ

ಹಾರೆನು–(ಕೊಡಲೆಂದು) ನಿರೀಕ್ಷಿಸೆನು

ಹಾವುತಿಂದವರ–ಹಾವು ಕಚ್ಚಿದವರನ್ನು

ಹೊಗಳತೆ–ಹೊಗಳಿಕೆ

ಹೊಂದಿತು–ಸತ್ತಿತ್ತು

ಹೊರೆ–1) ಸಮೀಪ, ಆಶ್ರಯ 2) ರಕ್ಷಿಸು

ಹೋರಿ–ಹೋರಾಟ ಮಾಡಿ

## ವಚನಗಳ ಅಕಾರಾದಿ

ಓರಿಯಂಟ್ ಪವರ್ ಪ್ರೆಸ್, ಬೆಂಗಳೂರು–27.

# ಬಸವ ಸಮಿತಿಯ ಪ್ರಕಟನೆಗಳು

1. **ಬಸವ ವಚನಾಮೃತ (ಕನ್ನಡ-೩ನೆಯ ಆವೃತ್ತಿ)** ಬೆಲೆ: ೭೫ ಪೈಸೆ
   ಶ್ರೀ ಬಸವಣ್ಣನವರ ೧೦೮ ಆಯ್ದ ವಚನಗಳ ಸಂಕಲನ,
   ವ್ಯಾಖ್ಯಾನ ಮತ್ತು ಶಬ್ದಾರ್ಥಗಳೊಂದಿಗೆ.
2. **ದಸ್ ಸ್ಪೀಕ್ ಬಸವಾ (Thus Spake Basava)** ಬೆಲೆ: ೫೦ ಪೈಸೆ
   ಬಸವ ವಚನಾಮೃತದ ಇಂಗ್ಲೀಷ್ ಅನುವಾದ,
3. **ಬಸವ ವಚನಾಮೃತಮ್ (ತಮಿಳು)** ಬೆಲೆ: ೫೦ ಪೈಸೆ
   ಬಸವ ವಚನಾಮೃತದ ತಮಿಳು ಅನುವಾದ.
4. **ಬಸವ ವಚನಾಮೃತಮು (ತೆಲಗು)** ಬೆಲೆ: ೩೫ ಪೈಸೆ
   ಬಸವ ವಚನಾಮೃತದ ತೆಲಗು ಅನುವಾದ.
5. **ಬಸವ ವಚನಾಮೃತಮ್ (ಸಂಸ್ಕೃತ)** ಬೆಲೆ: ೫೦ ಪೈಸೆ
   ಬಸವ ವಚನಾಮೃತದ ಸಂಸ್ಕೃತ ಅನುವಾದ.
6. **ಬಸವ ವಚನಾಮೃತ (ಹಿಂದಿ)** ಬೆಲೆ: ೫೦ ಪೈಸೆ
   ಬಸವ ವಚನಾಮೃತದ ಹಿಂದಿ ಅನುವಾದ.
7. **ಬಸವ ವಚನಾಮೃತ (ಮರಾಠಿ)** ಬೆಲೆ: ೫೦ ಪೈಸೆ
   ಬಸವ ವಚನಾಮೃತದ ಮರಾಠಿ ಅನುವಾದ.
8. **ಬಸವ ವಚನಾಮೃತ (ಉರ್ದು)** ಬೆಲೆ: ೫೦ ಪೈಸೆ
   ಬಸವ ವಚನಾಮೃತದ ಉರ್ದು ಅನುವಾದ.
9. **ಬಸವ ಸಾಹಿತ್ಯ ದರ್ಪಣ (Bibliography)**
   ಬಸವಣ್ಣನವರನ್ನು ಕುರಿತು ನಾನಾ ಭಾಷೆಗಳಲ್ಲಿ
   ರಚಿತವಾದ ೪೧೫ ಕೃತಿಗಳ ಸಂಕ್ಷಿಪ್ತ ವಿವರಣೆ ಬೆಲೆ: ೮ ರೂ.
10. **ಬಸವೇಶ್ವರರ ಸಮಕಾಲೀನರು**
    ಬಸವಣ್ಣ, ಅಲ್ಲಮ ಪ್ರಭು, ಚೆನ್ನಬಸವಣ್ಣ, ಅಕ್ಕಮಹಾದೇವಿ,
    ಸಿದ್ಧರಾಮ, ಮಡಿವಾಳ ಮಾಚಯ್ಯ ಮೊದಲಾದ ೫೨ ಮಂದಿ
    ಶರಣ ಶರಣೆಯರ ಸಂಶೋಧಿತ ಚರಿತ್ರೆಗಳು—೭೫೦ ಪುಟಗಳು.
    ಸಾದಾ ಪ್ರತಿ ೧೦ ರೂ.
    ಉತ್ತಮ ಪ್ರತಿ ೧೨ ರೂ.
11. **ಸಂಗಮ**
    ಬಸವಣ್ಣನವರನ್ನು ಕುರಿತ ಕವನಗಳ ಸಂಕಲನ
    ಸಾದಾ ಪ್ರತಿ ೧–೩೫
    ಉತ್ತಮ ಪ್ರತಿ ೧–೭೫

12. ವಚನ ಸಂಗೀತ—ಶಿವಶರಣರ ವಚನಗಳು—ಸ್ವರಪ್ರಸ್ತಾರ ಸಹಿತ.
ಬೆಲೆ: ೩ ರೂ.

13. ಬಸವಣ್ಣನವರ ತ್ರಿವರ್ಣ ಭಾವಚಿತ್ರ ಬೆಲೆ: ೭೫ ಪೈಸೆ
14" x 20" ಸೈಜು.

14. ಬಸವಣ್ಣನವರ ತ್ರಿವರ್ಣ ಭಾವಚಿತ್ರ ಬೆಲೆ: ೧೦ ಪೈಸೆ
ಪೋಸ್ಟ್‌ಕಾರ್ಡು ಸೈಜು.

15. ಶ್ರೀ ಬಸವೇಶ್ವರರು
ಶ್ರೀ ಬಸವಣ್ಣನವರ ಅಧಿಕೃತ ಜೀವನ ಚರಿತ್ರೆ—ಅವರ ಸಾಧನೆ–ಬೋಧನೆಯೊಂದಿಗೆ. (ಸರ್ಕಾರಿ ಪ್ರಕಟಣೆ) ಬೆಲೆ: ೮ ರೂ.

16. ಶ್ರೀ ಬಸವೇಶ್ವರ—Sri Basavesvara—8th Centenary Commemoration Volume ಬೆಲೆ: ೧೫ ರೂ.
ಶ್ರೀ ಬಸವಣ್ಣನವರ ವೈವಿಧ್ಯಪೂರ್ಣ ವ್ಯಕ್ತಿತ್ವವನ್ನು ಕುರಿತು ಅಂತರಾಷ್ಟ್ರೀಯ ಮಾನ್ಯತೆ ಪಡೆದ ವಿದ್ವಾಂಸರುಗಳು (ಇಂಗ್ಲೀಷಿನಲ್ಲಿ ಬರೆದ ಲೇಖನಗಳ ಸಂಗ್ರಹ (ಸರ್ಕಾರಿ ಪ್ರಕಟಣೆ)
ಬಸವ ಸಮಿತಿಯ ಸಂಪಾದಕ ಮಂಡಲಿಯಲ್ಲಿ ನಾಡಿನ ಗಣ್ಯ ವಿದ್ವಾಂಸರಿದ್ದಾರೆ, ಹಿರಿಯ ಸಂಶೋಧಕರಿದ್ದಾರೆ ಮತ್ತು ಶಿವಾನುಭವಿಗಳಿದ್ದಾರೆ.

ಅವರ ವಿದ್ವತ್ತು, ಅನುಭಾವ ಮತ್ತು ಪ್ರತಿಭೆಗಳ ಫಲಗಳೇ ಬಸವ ಸಮಿತಿಯ ಪ್ರಕಟನೆಗಳು.

**ಸದಸ್ಯರಿಗೆ:-**

ಬಸವ ಸಮಿತಿಯ ಸದಸ್ಯರಿಗೆ ಎಲ್ಲಾ ಪ್ರಕಟನೆಗಳನ್ನು ಶೇಕಡಾ ೨೫ರಷ್ಟು ಕಡಿಮೆ ಬೆಲೆಗೆ ಕೊಡಲಾಗುವುದು.

**ಪುಸ್ತಕ ವ್ಯಾಪಾರಿಗಳಿಗೆ—**

ಧಾರಾಳವಾದ ಕಮಿಷರ್ನ ಕೊಡಲಾಗುತ್ತೆ.

ಮುಂಗಡ ಹಣವಿಲ್ಲದೆ ವಿ. ಪಿ. ಕಳಿಸಲಾಗುವುದಿಲ್ಲ.

ವಿವರಗಳಿಗೆ :

ಜನರಲ್ ಸೆಕ್ರೆಟರಿ,
ಬಸವ ಸಮಿತಿ, ಬಸವ ಭವನ
ಹೈಗ್ರೌಂಡ್ಸ್, ಬೆಂಗಳೂರು-1
ಇವರೊಂದಿಗೆ ಪತ್ರವ್ಯವಹಾರ ಮಾಡಿರಿ.

ಎತ್ತೆತ್ತ ನೋಡಿದರೆ ಅತ್ತತ್ತ ಬಸವನೆಂಬ ಬಳ್ಳಿ !
ಎತ್ತಿನೋಡಿದರೆ ಲಿಂಗವೆಂಬ ಗೊಂಚಲು ! !
ಒತ್ತಿ ಹಿಂಡಿದರೆ ಭಕ್ತಿಯೆಂಬ ರಸವಯ್ಯ !!!

ಮಡಿವಾಳ ಮಾಚಯ್ಯ